ಲೇಖನಗಳನ್ನು ಕಾಗದದ ಒಂದೇ ಮಗ್ಗುಲಿಗೆ ಸ್ಫುಟವಾಗಿ ಬರೆದು ಕಳುಹಿಸಬೇಕು. ಸಾದರ ಸ್ವೀಕಾರ ಮತ್ತು ರಿವ್ಯೂಗಾಗಿ ಪುಸ್ತಕಗಳನ್ನು ಕಳುಹಿಸುವಾಗ ಎರಡು ಪ್ರತಿಗಳನ್ನು ಕಳುಹಿಸಿ. ಆಯ್ದ ಪುಸ್ತಕಗಳನ್ನು ರಿವ್ಯೂ ಮಾಡಲಾಗುವುದು.

ಲೇಖನ/ರಿವ್ಯೂಗಾಗಿ ಪುಸ್ತಕಗಳನ್ನು ಕಳುಹಿಸುವ ವಿಳಾಸ—

**ಗಂಗಾಧರಮೂರ್ತಿ**

6(2), ಬೀಜಿಟಿ ಬಿಲ್ಡಿಂಗ್ಸ್
ಧನಲಕ್ಷ್ಮಿ ಗಿರಣಿ ಹಿಂಭಾಗ
ಶ್ರೀನಗರ, ಗೌರಿಬಿದನೂರು–561 408

ಚಂದಾ ಮತ್ತು ವ್ಯವಹಾರ—

**ಸಮುದಾಯ ವಾರ್ತಾ ಪತ್ರ**
46, ಅಂಗಡಿಬೀದಿ, ಬಸವನಗುಡಿ
ಬೆಂಗಳೂರು–560 004

ವಾರ್ಷಿಕ ಚಂದಾ ರೂ. **15** ಆಜೀವ ಚಂದಾ ರೂ. **200**

ಬಿಡಿಪ್ರತಿ ರೂ. **1–50**



**ಓದುಗರಲ್ಲಿ ವಿನಂತಿ**

ಎಷ್ಟೇ ಪ್ರಯತ್ನಿಸಿದರೂ ಇತ್ತೀಚಿನ ಸಂಚಿಕೆಗಳನ್ನು ತಾಂತ್ರಿಕ ಕಾರಣದಿಂದಾಗಿ ಸಕಾಲದಲ್ಲಿ ಪ್ರಕಟಿಸಲು ಸಾಧ್ಯವಾಗಲಿಲ್ಲ. ಈ ವಿಳಂಬಕ್ಕಾಗಿ ಓದುಗರಲ್ಲಿ ಕ್ಷಮೆ ಕೋರುತ್ತೇವೆ.

—ಸಂಪಾದಕ.

ಸಮುದಾಯ ವಾರ್ತಾಪತ್ರ 60-61 ಮೇ-ಜೂನ್ 1984

ಸಂಪಾದಕ
**ಗಂಗಾಧರಮೂರ್ತಿ**

ವ್ಯವಸ್ಥಾಪಕ ಸಂಪಾದಕ
**ಪ್ರದೀಪ್**

ಪ್ರಸಾರ ವ್ಯವಸ್ಥಾಪಕ
**ಎಸ್. ಸಿ. ನರಸಿಂಹಯ್ಯ**

## ಈ ಸಂಚಿಕೆಯಲ್ಲಿ....


| | |
|---|---|
| ತೇಜಸ್ವಿ–ಡಿ. ಎಸ್. ನಾ– | ಒಂದು ಬಾನುಲಿ ಸಂದರ್ಶನ |
| ಧರ್ಮ–ಪೂರಕವೋ ಮಾರಕವೋ | ದೇವಿಪ್ರಸಾದ್ ಚಟ್ಟೋಪಾಧ್ಯಾಯ<br>ಅನು : ಗಂಗಾಧರಮೂರ್ತಿ |
| ಮದುವೆಯ ನಡುವೆ ಮರಣವಡ್ಡ ಬಿದ್ದಿತಲ್ಲಾ–ಮಾಡಿಯಾ | ಕಿ. ರಂ. ನಾಗರಾಜ್ |
| ಸ್ವಾತಂತ್ರ್ಯ ಮತ್ತು ಭಗತ್‌ಸಿಂಗ್ ನಾಟಕದ ಕೆಲವು ಅಂಶಗಳು | ಕೆ. ಎಸ್. ರಂಗನಾಥ್ |
| ಅವಲೋಕನ–ಕಂಬಳಿ ಸಿದ್ದಪ್ಪ | ಐ. ಆರ್. ಪ್ರಮೋದ್ |
| ಅಂತರ್ಜಾತೀಯ ವಿವಾಹಗಳು | ಮಹಾಬಲೇಶ್ವರರಾವ್ |
| ದಲಿತಸಾಹಿತ್ಯ–ಒಂದುನೋಟ | ಎಲ್. ಹನುಮಂತಯ್ಯ |
| ಗೌರಿ | ಪುರಾಣಂ ಸುಬ್ರಮಣ್ಯ ಶರ್ಮ<br>ಅನು : ನಗರಗೆರೆ ರಮೇಶ್ |
| ಗೊಂಬೆಯಾಟ ಮತ್ತು ಕೋಲಾಟ : ಟಿಪ್ಪಣಿಗಳು | ಎಸ್. ಎಸ್. ಹಿರೇಮಠ |
| ಪುಸ್ತಕ ವಿಮರ್ಶೆ | ಟಿ. ಎಸ್. ವೇಣುಗೋಪಾಲ್, ಶೈಲಜ |
| ಸ್ವೀಕಾರ | |


ಮುಖಚಿತ್ರ : ಸ್ನೋಡೌನ್‌ರವರ "ಪೆರು"


ಮುದ್ರಕರು-ಪ್ರಕಟಣೆ : ಪಿ. ಗಂಗಾಧರಸ್ವಾಮಿ, ಪ್ರಧಾನ ಕಾರ್ಯದರ್ಶಿ, ಸಮುದಾಯ ಸಮನ್ವಯ ಸಮಿತಿ (ರಿ), 46, ಅಂಗಡಿ ಬೀದಿ, ಬಸವನಗುಡಿ, ಬೆಂಗಳೂರು–4

ಮುದ್ರಣ : ನುಡಿ ಮುದ್ರಣ, ರಾಣೋಜಿರಾವ್ ರಸ್ತೆ, ಬೆಂಗಳೂರು–4

# ತೇಜಸ್ವಿ–ಡಿ.ಎಸ್. ನಾಗಭೂಷಣ:
# ಒಂದು ಬಾನುಲಿ ಸಂದರ್ಶನ

---

**ಡಿ.ಎಸ್.ಎನ್ :** ತೇಜಸ್ವಿಯವರೆ, ನಮ್ಮ ರಾಷ್ಟ್ರವನ್ನ ನಾವು ಸ್ವತಂತ್ರ ಪ್ರಜಾಪ್ರಭುತ್ವವಾದಿ ಸಮಾಜವಾದಿ ಗಣರಾಜ್ಯ ಅಂತ ಘೋಷಿಸಿಕೊಂಡಿದ್ದೇವೆ. ಅಂದ್ರೆ ನಮ್ಮನ್ನ ನಾವೆ ಸಮಾನತಾ ತುಡಿತದೊಂದಿಗೆ ಆಳಿಕೊಳ್ಳುವ Concept ಇದು. ಈ ಪ್ರಯೋಗ ಎಷ್ಟರ ಮಟ್ಟಿಗೆ ಸಾರ್ಥಕ ಆಗಿದೆ ಅನ್ನಿಸತ್ತೆ ನಿಮಗೆ ?

**ತೇಜಸ್ವಿ :** ನೋಡಿ, ನಮ್ಮ ಸ್ವಾತಂತ್ರ ಹೋರಾಟ ಸಂದರ್ಭದಲ್ಲಿ ಭಾವೈಕ್ಯತೆ, ರಾಷ್ಟ್ರೀಯತೆ ಮುಂತಾದ ಒತ್ತಡಗಳು ಕೆಲಸ ಮಾಡಿದವು. ಆದ್ರೆ ನಮ್ಮ ಸ್ವಾತಂತ್ರ್ಯ ಬಂದ 35 ವರ್ಷಗಳ ತರುವಾಯ ಈ ಒತ್ತಡಗಳು ನಮ್ಮ ರಾಷ್ಟ್ರದ ಆರ್ಥಿಕ ಹಾಗೂ ಆಡಳಿತ ಪದ್ಧತಿಯ ಕೇಂದ್ರೀಕರಣಕ್ಕೆ ಕಾರಣ ಆದವು. ಬರೀ ಈ ಭಾವುಕ ಕಲ್ಪನೆಗಳು ಮಾತ್ರ ಕಾರಣ ಆದವು ಅಂತ ನಾ ಹೇಳೋದಿಲ್ಲ. ಇದಕ್ಕೆ ಅಂತರರಾಷ್ಟ್ರೀಯ ಒತ್ತಡಗಳು, ಡಿಫೆನ್ಸ್, ಬೇರೆ ರಾಷ್ಟ್ರಗಳ ಭಯ ಇತ್ಯಾದಿಗಳು ಎಲ್ಲ ಕಾರಣ ಆಗಿದಾವೆ. ಆದ್ರೆ ನಮ್ಮ ಏಷ್ಯಾದ ಪರಿಸರದಲ್ಲಿ ಕೇಂದ್ರೀಕರಣ, ಯೂರೋಪಿನ ಪರಿಸರದಲ್ಲಿ ಹಾಗೆ ಸಂಪದಭಿವೃದ್ಧಿ ಮಾಡ್ಸೊ ಹಾಗೆ ಮಾಡುವುದಕ್ಕೆ ಆಗೋದಿಲ್ಲ ಅಂತ್ಹೇಳಿ 35 ವರ್ಷದ ತರುವಾಯ ನಾವು ಯೋಚನೆ ಮಾಡ್ತಾ ಇದೀವಿ. ಆದ್ರಿಂದ ಇವತ್ತು

---

ಮಾರ್ಟಿನ್ ಬ್ಯೂಬರ್, ರಸೆಲ್, ಲೋಹಿಯಾ, ಗಾಂಧಿ ಮುಂತಾದ ಚಿಂತಕರು ತಮ್ಮ ತಮ್ಮ ಮಾತುಗಳಲ್ಲಿ ವಿಕೇಂದ್ರೀಕರಣದ ಅವಶ್ಯಕತೆಯನ್ನು ಒತ್ತಿ ಹೇಳಿದ್ದಾರೆ. ಮಾರ್ಕ್ಸ್‌ನ State will wither away ಎನ್ನುವ ಹೇಳಿಕೆಯ ಹಿಂದೆ ವಿಕೇಂದ್ರೀಕರಣದ ಒತ್ತಾಸೆಯಿರುವುದನ್ನು ಎರಿಕ್‌ಫ್ರಾಮ್, ಹಲವಾರು ಸಂದರ್ಭಗಳಲ್ಲಿ, ಪ್ರತಿಪಾದಿಸುತ್ತಾನೆ. ಯಾವ ಸನ್ನಿವೇಶದಲ್ಲಿ ಇದು ಹುಟ್ಟಿಬರುತ್ತದೆ ಎನ್ನುವುದರ ಬಗ್ಗೆ ಮಾತ್ರ ಭಿನ್ನಾಭಿಪ್ರಾಯಗಳಿವೆ.

ಈ ಸಂದರ್ಶನವನ್ನು ದೊರಕಿಸಿಕೊಟ್ಟ ಗೆಳೆಯ ಬಿದರಹಳ್ಳಿಯವರಿಗೆ ಕೃತಜ್ಞತೆಗಳು.

ಭಾರತದಲ್ಲಿ ಬಹಳ ಪ್ರಬಲವಾಗಿ ಕೆಲಸ ಮಾಡ್ತಿರೋಂಥ ಶಕ್ತಿ : ವಿಕೇಂದ್ರಿಕರಣ, ರಾಜ್ಯಗಳಿಗೆ ಹೆಚ್ಚಿನ ಸ್ವಾಯತ್ತತೆ ಮುಂತಾದವು. ಒಂದು ರೀತೀಲಿ ನನ್ಗನ್ಸತ್ತೆ, ಇದು ಮಹಾತ್ಮಾ ಗಾಂಧಿಯವರ ಗ್ರಾಮ ಸ್ವರಾಜ್ಯದ ಕಲ್ಪನೆ ಕಡೆಗೆ ಹೋಗ್ತಾ ಇರೋಂಥ ಒಂದು ದಾರಿ ಅಂತ. ಸ್ವಾಯತ್ತತೆ ಬಗ್ಗೆ ನಾವು ಹೋರಾಟ ಮಾಡ್ತಾ ಇರೋ ಪರಿಸ್ಥಿತಿಗಳನ್ನ ನಮ್ಮ ಭಾರತದ ಅನೇಕ ರಾಜ್ಯಗಳಲ್ಲಿ ಕಾಣಬಹುದು. ನಾನಾ ಸ್ವರೂಪಗಳಲ್ಲಿ ನಾನಾ ರೀತಿಗಳಲ್ಲಿ ಇಲ್ಲಿ ಕಂಡು ಬರ್ತಾ ಇದಾವೆ. ಇವುಗಳಲ್ಲಿ ಎರಡು extreme examples : ಒಂದು ಅಸ್ಸಾಮು, ಮತ್ತೊಂದು ಪಂಜಾಬು. ಈ ಒತ್ತಡಗಳು ಕೇಂದ್ರೀಕರಣದ ಅಡಿ ವಿಕಲಗೊಂಡು ಒಂದೊಂದು ಸಾರಿ ಪ್ರತ್ಯೇಕತೆ ಕಡೆಗೆ, ಪ್ರತ್ಯೇಕತಾವಾದದ ಕಡೆಗೆ, ಜಾತಿವಾದಿ ರಾಷ್ಟ್ರವೊಂದನ್ನ ಕಟ್ಟಬೇಕು ಅನ್ನೋದರ ಕಡೆಗೆ ಹೋಗಿರೋದನ್ನ ಪಂಜಾಬಿನಂಥ ಪರಿಸರದಲ್ಲಿ ನಾವು ಕಾಣಬಹುದು. ಆದ್ರೆ ನಮ್ಮ ಕರ್ನಾಟಕದ ಧೋರಣೆ ಇದರಲ್ಲಿ ಬಹಳ ಅತ್ಯುತ್ತಮವಾಗಿ ಕಾಣಿಸ್ತಾ ಇದೆ. ಯಾಕಂದ್ರೆ ದಿಲ್ಲಿಯಿಂದ ಹೆಚ್ಚಿನ ಆರ್ಥಿಕ ಮತ್ತು ರಾಜಕೀಯ ಸ್ವಾಯತ್ತತೆಯನ್ನು ಕೇಳೋದರ ಜೊತೇಗೇನೆ ಕರ್ನಾಟಕದ ಒಳಗೇ ರಾಜ್ಯ ಸರ್ಕಾರ ತನ್ನಲ್ಲಿರೋ ಅಧಿಕಾರವನ್ನ, ತನ್ನ ಕೈ ಕೆಳಗಿನ ಸಂಘಟನೆಗಳಿಗೆ, ಘಟಕಗಳಿಗೆ, ಹಂಚ್ಕೊಡೋದಕ್ಕಾಗಿ ಪ್ರಯತ್ನ ಮಾಡ್ತಾ ಇದೆ. ಜಿಲ್ಲಾ ಪರಿಷತ್, ಮಂಡಲ ಪಂಚಾಯತ್ ಮುಂತಾದ ಘಟಕಗಳನ್ನು ರಚಿಸಿ ಅವಕ್ಕೆ ಹೆಚ್ಚಿನ ಆರ್ಥಿಕ ಮತ್ತು ರಾಜಕೀಯ ಅಧಿಕಾರವನ್ನು ದಯಪಾಲಿಸಬೇಕು ಅಂತ ಯೋಚ್ನೆ ಮಾಡ್ತ ಇರೋದು ನಮ್ಮ ರಾಮಕೃಷ್ಣ ಹೆಗ್ಡೆ ಮತ್ತು ನಜೀರ್ ಸಾಬರ ಬಹಳ ದೊಡ್ಡ ಕಲ್ಪನೆ ಅಂತ ನಂಗೆ ಅನ್ನಿಸ್ತಾ ಇದೆ.

**ಡಿ.ಎಸ್.ಎನ್** : ಈ ವಿಕೇಂದ್ರೀಕರಣದ ತುಡಿತ ಇದೆ ಅಂತ ಹೇಳಿದ್ರಲ್ಲ, ಇದರ ಹಿಂದಿರೋ ಆರ್ಥಿಕ, ಸಾಮಾಜಿಕ ಶಕ್ತಿಗಳು ಯಾವುವು ? ಈ ತುಡಿತ ಯಾಕಿಷ್ಟು ತೀವ್ರವಾಗಿ ಈಗ 35 ವರ್ಷಗಳ ನಂತ್ರ ನಮ್ಮನ್ನ ಕಾಡ್ತಾ ಇದೆ ? ಈ ತುಡಿತದಿಂದ ಪ್ರಜೆ ಇನ್ನಷ್ಟು ಚಿಂತನಶೀಲನಾಗುವ ಸಾಧ್ಯತೆ ಏನಾದ್ರೂ ಇದೆಯಾ ?

---

**ತೇಜಸ್ವಿ** : ನೋಡಿ, ನಾಗ್ಭೂಷಣ್, 35 ವರ್ಷದ ತರುವಾಯ, ನಾವು ಕಂಡ್ಕೊಳ್ತಾ ಇದೀವಿ ನಮ್ಮ ದೇಶದ ಆಡಳಿತ ನಡೆಸೋದಕ್ಕೆ, Communication, transportation–ಇವಕ್ಕೆ ಬೇಕಾಗಿರೋ ಸಂಪನ್ಮೂಲಗಳು ಬತ್ತಿ ಹೋಗ್ತಾ ಆದಾವೆ ಅನ್ನೋದ್ನ. ನಮ್ಮ ರಫ್ತಿನ ಬಹುಪಾಲನ್ನ ನಾವು ಪೆಟ್ರೋಲಿಗಾಗಿ ಖರ್ಚು ಮಾಡಬೇಕಾಗಿದೆ. ನಮ್ಮ ರಾಷ್ಟ್ರೀಯತೆ ಮುಂತಾದವುಗಳ

ಹಿಂದೆ ಆಯಾ ಕಾಲದ ಸಂಪರ್ಕ ಸಾಧನಗಳು ಮತ್ತು ಶಕ್ತಿಮೂಲಗಳು ಸಹಾಯ ಮಾಡಿವೆ ಅನ್ನೋದ್ನ ನಾವು ಮರೀಬಾರ್ದು. ನಮಗೆ ಪೆಟ್ರೋಲು, ಏರೋಪ್ಲೇನು ಮುಂತಾದವುಗಳೆಲ್ಲ ಇಲ್ದೆ ಇತ್ತು ಅಂತ ಇಟ್ಕೊಳ್ಳಿ. ಎತ್ತಿನ ಗಾಡಿಯಲ್ಲಿ ನಾವು transport ಮಾಡ್ತ ಇದ್ವಿ ಅಂತಿಟ್ಕೊಳ್ಳಿ. ಆವಾಗ, ದೆಹಲಿವರೆಗೆ ಹೋಗಿ ನಮ್ಮ ಆಶೋತ್ತರಗಳನ್ನೆಲ್ಲ ಕಾನೂನಾಗಿ ಪರಿವರ್ತಿಸಿ, ನಮ್ಮ ದೇಶದ ಆಳ್ವಿಕೆ ಮಾಡೋದಿಕ್ಕೆ ಸಾಧ್ಯವೆ ಆಗ್ತಿರಲಿಲ್ಲ ಅನ್ನೋದು ಒಪ್ಪಬೇಕಾಗುತ್ತೆ. ಹೌದಾ ? ಆದ್ರಿಂದ, ನಾವು ನಮ್ಮ ರಾಷ್ಟ್ರೀಯತೆ, ಭಾವೈಕ್ಯತೆ ಮುಂತಾದವಕ್ಕೆಲ್ಲ ಒಂದು ಪಾರಮಾರ್ಥಿಕ ಮೂಲ ನೋಡ್ತೀವಿ. ಆದ್ರೆ ಆರ್ಥಿಕ ಶಕ್ತಿ ಮೂಲಗಳು ಎಷ್ಟರ ಮಟ್ಟಿಗೆ ಇವಕ್ಕೆ ಸಹಾಯ ಮಾಡಿವೆ ಅನ್ನೋದ್ನ ನಾವು ಮರೆಯೋದಕ್ಕೆ ಆಗಲ್ಲ. ಈ ಶಕ್ತಿಮೂಲಗಳು ಯಾವತ್ತೂ ಬತ್ತದೆ ಇರೋಂಥ ಒರತೆ. ಹಾಗಾಗಿ ಏನಾಗತ್ತೇ, ದೇಶದ ಅಗಾಧವಾದ ಸಂಪತ್ತಿನ ಒಂದು ಭಾಗವೆ ಇದನ್ನ administer ಮಾಡೋದು, ಆಳ್ವಿಕೆ ನಡೆಸೋದಕ್ಕೇನೆ ಖರ್ಚಾಗಿ ಹೋಗ್ತಾ ಇದೆ. ಪ್ರತಿಯೊಂದಕ್ಕೂ ಒಬ್ಬ ತಾಲ್ಲೂಕು ಹೆಡ್‌ಕ್ವಾರ್ಟರ್ಸ್ಸಿಗೋ ಅಥವಾ ರಾಜ್ಯದ ವಿಧಾನಸೌಧಕ್ಕೋ ಅಥವಾ ದೆಹಲಿಗೋ ಹೋಗೋದ್ರಲ್ಲೇ ವ್ಯರ್ಥವಾಗ್ತ ಇದೆ. ಇವುಗಳು ಈಗ, 35 ವರ್ಷಗಳ ತರುವಾಯ ತಡಿಲಾರದಷ್ಟಾಗಿರದ್ರಿಂದಾನೆ, ನಾವೀಗ, ವಿಕೇಂದ್ರಿಕರಣದ ಬಗ್ಗೆ ಯೋಚ್ನೆ ಮಾಡ್ಬೇಕು. ಇಷ್ಟೊಂದು ಪಂಚವಾರ್ಷಿಕ ಯೋಜನೆಗಳಾದರೂ ಇವು ಜನತೆಯನ್ನ ತಲುಪೇ ಇಲ್ಲಾಂತ್ಹೇಳಿ ನಮ್ಮ ಆರ್ಥಿಕ ತಜ್ಞರೆಲ್ಲ ಹೇಳ್ತಾ ಇದಾರೆ. ಜನತೆಗೆ ತಲುಪಿಲ್ಲಾಂತ ಹೇಳಿ ಇನ್ನೇಲಿಂದ ನಮ್ಮ ಆಡಳಿತ ವಿಧಾನಾನ ಚುರುಕುಗೊಳಿಸಬೇಕು ಅಂತ ಯೋಚ್ನೆ ಮಾಡೋ ತಂಡ ಒಂದಿದೆ. ಆದ್ರೆ ಯಾವ ಆಡಳಿತ ವಿಧಾನದಲ್ಲಿ ಈಗ ಕಂಡು ಬರ್ತಾ ಇರೋ ಲೋಪದೋಷಗಳು ಅನುಷಂಗಿಕವಾಗಿದಾವೋ, ಒಳಗೇನೇನೆ, ಅಂಥ ಆಡಳಿತ ವಿಧಾನಾನ ಹೆಚ್ಚು efficient ಮಾಡೋದ್ರಿಂದ ಬಹಳ ಬೇಗ ನಾವು ಅಧಃಪಾತಾಳಕ್ಕೆ ಬೀಳ್ತೀವಿ. ಈ ಥರಾ ಯೋಚನೆ ಮಾಡೋ ಜನಾನೂ ಬೇರ್ರೆ ಇದಾರೆ. ಇದನ್ನ efficient ಮಾಡೋದ್ರಿಂದ ಪ್ರಯೋಜ್ನ ಇಲ್ಲ. Fileಗಳನ್ನ ಭಾಳ ಬೇಗ ಬೇಗ move ಮಾಡೋದ್ರಿಂದ ಭಾಳ ಬೇಗ ಬೇಗ ಕಾರ್ಯ ನಡೀತ್ತದೆ ಅಂತ ಹೇಳಲಿ. ಆ ಫೈಲುಗಳು, ಒಂದು ಫೈಲಿಗೆ ಹದಿನೈದು, ಮೂವತ್ತು ಫೈಲುಗಳಿಗೆ ದಾರಿ ಮಾಡಿಕೊಡ್ತವೆ. ಆದ್ರಿಂದ ಏನಾಯ್ತು ? ಇದನ್ನ efficient ಮಾಡೋದ್ರಿಂದ ಇನ್ನಷ್ಟು ಬ್ಯೂರೋಕ್ರಸಿ, ಇನ್ನಷ್ಟು ಆಫೀಸುಗಳು, ಇನ್ನಷ್ಟು ಫೈಲುಗಳು, ಇನ್ನಷ್ಟು ಜನಗಳ ಓಡಾಟ, ಅದಕ್ಕಾಗಿ ಇನ್ನಷ್ಟು ಪೆಟ್ರೋಲು, ಇಂಧನ ಮೂಲಗಳು ಎಲ್ಲ ಖರ್ಚಾಗ್ತವೆ. ಇನ್ನಷ್ಟು ತೊಂದ್ರೇಗೆ ನಾವು ಸಿಕ್ಕಾಕೊಳ್ತೀವಿ. ಯಾವ ಆಡಳಿತ ಪದ್ಧತಿಯಲ್ಲಿ ಈ ರೀತಿಯ ಲೋಪದೋಷಗಳು ಅನುಷಂಗಿಕವಾಗಿರ್ತಾವೋ ಅಂಥ ಆಡಳಿತ

ಪದ್ಧತಿಯನ್ನ ಹೆಚ್ಚು effcient ಮಾಡೋದಿಂದ್ರ, ವಿಚಕ್ಷಣೆಯಿಂದ ಮಾಡೋದ್ರಿಂದ, ಇದನ್ನ ನಾವು ಪರಿಹರಿಸ್ತೇವೆ ಅನ್ನೋದು ಸುಳ್ಳು ಅನ್ನೋದು ಗೊತ್ತಾಗ್ತ ಇದೆ ನಮ್ಗೆ. ಆದ್ರಿಂದ್ಲೇನೆ ಈಗ ನಾವು ಇದನ್ನ ಆಮೂಲಾಗ್ರವಾಗಿ ಬದಲಾವಣೆ ಮಾಡಿ ಇದ್ರ ದಿಕ್ಕನ್ನೆ ಬದಲಾಯಿಸಬೇಕು ಅಂತ ಯೋಚ್ನೆ ಮಾಡ್ತಾ ಇರೋದೇ ವಿಕೇಂದ್ರಿಕರಣದತ್ತ, ಪಂಚಾಯತ ರಾಜ್ಯದತ್ತ ಹೋಗ್ಬೇಕಾಗಿ ಬಂದಿರೋಂಥದು. ಇದು ಜನಗಳ ಮೇಲಿನ ಕರುಣೆಯಿಂದ ಅಲ್ಲ. ಒಂದು ಆರ್ಥಿಕ ಅಗತ್ಯದಿಂದ ಯೋಚ್ನೆ ಮಾಡ್ತ ಇದೇವೆ ಅನ್ನೋದ್ನ ನಾವು ತಿಳ್ಕೋಬೇಕು.

**ಡಿ.ಎಸ್.ಎನ್** : ತೇಜಸ್ವಿಯವರೆ, ನೀವು ಈವರೆಗೆ ವಿಕೇಂದ್ರಿಕರಣದ ಬಗ್ಗೆ ಮಾತಾಡಿದ್ರಿ, ಇಂಥ ವಿಕೇಂದ್ರಿಕರಣದಿಂದ ಮೂಲಭೂತವಾಗಿ ಪ್ರಜೆಯ ಆಲೋಚನಾ ವಿಧಾನ ಬದಲಾಗೋ ಸಾಧ್ಯತೆ ಏನಾದ್ರೂ ಇದೆ ಅನ್ಸುತ್ತಾ ನಿಮಗೆ ? ಅಂದ್ರೆ ಇದರ ಮೂಲಕ ನಮ್ಮ ಗ್ರಾಮ ಜನಜೀವನದಲ್ಲಿ ಸೃಷ್ಟಿಶೀಲತೆ ಸಂಪೂರ್ಣವಾಗಿ ಜಾಗೃತವಾಗುತ್ತ ?

**ತೇಜಸ್ವಿ** : ಪಂಚವಾರ್ಷಿಕ ಯೋಜನೆಗಳು ಜನಗಳ್ನ ತಲುಪಿಲ್ಲ, ನಮ್ಮ ಆರ್ಥಿಕ ಪುನಶ್ಚೇತನ ಸಮರ್ಪಕವಾಗಿ ಆಗ್ಲಿಲ್ಲಾಂತ್ಹೇಳಿ ನಾವು ಮಾತ್ನಾಡ್ತೀವಲ್ಲ, ನಾಗ್ಬೂಷ್ಣ, ಅದು ಇನ್ನೇನಕ್ಕೂ, ಇನ್ಯಾವ ಕಾರಣದಿಂದ್ಲೂ ಅಲ್ಲ. ಈಗ ಆರ್ಥಿಕ ತಜ್ಞರು ಅಂತ್ಹೇಳಿದ್ರೆ, ಅವರು ಕೇವಲ ತಮ್ಮ ಕ್ಷೇತ್ರದಲ್ಲಿ ಮಾತ್ರ ತಜ್ಞರಾಗಿರ್ತಾರೆ. ಸಮಾಜಶಾಸ್ತ್ರ ತಜ್ಞರು ಅಂದ್ರೆ ಕೇವಲ ತಮ್ಮ ಕ್ಷೇತ್ರದಲ್ಲಿ ಮಾತ್ರ ತಜ್ಞರಾಗಿರ್ತಾರೆ. ಆದ್ರೆ, ಜೀವನದಲ್ಲಿ ಏನಾಗ್ತದೆ ಅಂದ್ರೆ, ಜೀವನದಲ್ಲಿ ನಾವು ಆರ್ಥಿಕ ಸಮಸ್ಯೆ ಅಂತಾನೇ ಆಗ್ಲಿ, ಸಾಮಾಜಿಕ ಸಮಸ್ಯೆ ಅಂತಾನೇ ಆಗ್ಲಿ, ಯಾವುದೋ ಒಂದು aspect ಮಾತ್ರ ಇರೋವಂಥ ಸಮಸ್ಯೆಗಳನ್ನ ಎದುರಿಸೋದಿಲ್ಲ. ಜೀವನದಲ್ಲಿ ಎದುರಿಸೋದು ಮಾನವೀಯ ಸಮಸ್ಯೆಗಳನ್ನ. ಆರ್ಥಿಕ ಸಮಸ್ಯೆಗಳು, ಸಾಮಾಜಿಕ ಸಮಸ್ಯೆಗಳು ಅಂತ ನಾವು ವಿಶ್ಲೇಷಣೆ ಮಾಡಬೇಕಾದ್ರೆ, ನಮ್ಮ ಅನುಕೂಲಕ್ಕಾಗಿ ನಾವು ಮಾಡ್ತೇವೇ ಹೊರ್ತು ಅವೆಲ್ಲ ಮಾನವೀಯ ಸಮಸ್ಯೆಗಳೇನೆ. ಈಗ್ನೋಡಿ, ನಮ್ಮಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಅಂತ್ಹೇಳಿ ನಾವು ಅನೇಕ ಕೆಲಸ ಕಾರ್ಯಗಳನ್ನ ಗ್ರಾಮ ಜೀವನದ ಉದ್ಧಾರಕ್ಕೆ ಮಾಡಿದೀವಿ. ಆದ್ರೆ ಅವುಗಳಿಂದ substantial ಅನ್ನೋ ಅಂಥ ಒಂದು ಬದ್ಲಾವಣೆಯನ್ನೂ ನಾವು ಸೃಷ್ಟಿ ಮಾಡೋದಕ್ಕೆ ಆಗ್ಲಿ, ಗ್ರಾಮದ ಒಂದು ಜೀವನಕ್ರಮದ ಮೇಲೆ, ಆಲೋಚನಾ ಕ್ರಮದ ಮೇಲೆ ಕೇಂದ್ರೀಕೃತ ಪದ್ಧತಿಯ ಸಹಾಯದಿಂದ ಮಾಡಿರೋಂಥ ಯಾವ ಬದ್ಲಾವಣೇನೂ ಆಳವಾಗಿ ಬೇರೂರೋಹಂಗೆ ಕೆಲಸ ಮಾಡಿಲ್ಲ. ಇವಕ್ಕೆ ಕಾರಣ ಏನಪ್ಪಾ

ಅಂತ್ಹೇಳಿದ್ರೆ, ಮೊದಲ್ನೇದಾಗಿ–ನಾವು ನಮ್ಮ ಗ್ರಾಮಗಳ್ನ ಸಮರ್ಪಕವಾಗಿ ಅರ್ಥ ಮಾಡ್ಕೊಳ್ಳೋದಕ್ಕೆ ಸದ್ಯದ ವಿದ್ಯಾಭ್ಯಾಸದ ಕ್ರಮದಿಂದ್ಲೆ ಆಗಲಿ, ಅದ್ರಿಂದ ಉತ್ಪತ್ತಿಯಾಗಿರೋಂಥ ತಜ್ಞರ ಆಲೋಚನಾ ಕ್ರಮದಿಂದ್ಲೆ ಆಗ್ಲಿ ಮುಟ್ಟೋದಿಕ್ಕೆ ಸಾಧ್ಯ ಆಗಿಲ್ಲ. ಎರಡ್ನೇದಾಗಿ, ನಾವು ಮೇಲಿಂದ ಅವರ ಮೇಲೆ ಕೆಲವು ಕಾರ್ಯಕ್ರಮಗಳ್ನ ಹೇರ್ತೀವೆ–ನಮ್ಮ ದೇಹದಲ್ಲಿ ಹ್ಯಾಗೆ ಒಂದು Foreign body ಯನ್ನ reject ಮಾಡೋ mechanism ಇದೆಯೋ ಅದೇ ರೀತಿ ಗ್ರಾಮದ ಪರಿಸರ ಅದ್ನ reject ಮಾಡಿಬಿಡುತ್ತೆ. Reject ಮಾಡ್ಬಿಡುತ್ತೇಂದ್ರೇನು ? ಆ ಅಭಿವೃದ್ಧಿ ಕಾರ್ಯಕ್ರಮಗಳು ಪುನರುಜ್ಜೀವನ ಗೊಳಿಸ್ದೇನೇನೆ, ಅಲ್ಲೇ ನಾಶಾಗಿ ಬತ್ಹೋಗಿ ಬಿಡ್ತಾವೆ. ಅನೇಕ Loanಗಳು, ಸಾಲಗಳನ್ನ ಕೋಡ್ತಾರೆ, ಗ್ರಾಮಗಳ ಸಂಪದಭಿವೃದ್ಧಿಯಾಗಲಿ ಅಂತ್ಹೇಳಿ. ಈಚೆಗೆ ಬೇಕಾದಷ್ಟು ಅಭಿವೃದ್ಧಿ ಕಾರ್ಯಕ್ರಮಗಳನ್ನ ಹಾಕಿದಾರೆ. ಅವೆಲ್ಲ ಯಾಕೆ ವಿಫಲವಾದ್ವು ಅಂತ್ಹೇಳಿ ನಾನು ಅವುಗಳಿಗೆ ಸಂಬಂಧಪಟ್ಟ ಫೈಲುಗಳನ್ನೆಲ್ಲ ತಗಂಬಂದು study ಮಾಡಿದೀನಿ. ವಿದ್ಯಾರ್ಥಿ ಥರ ಅದನ್ನ ಅಭ್ಯಾಸ ಮಾಡಿದೀನಿ. ಅವುಗಳಲ್ಲಿ ಮುಖ್ಯವಾಗಿ ನನಗೆ ಮೂರು ಕಾರಣ ಕಂಡ್ವು : ಮೊದಲ್ನೇದು, ಅವರಿಗೆ Channels of Investment, ಅಂದ್ರೆ ಬಂಡ್ವಾಳ ವನ್ನ ತೊಡಗಿಸುವ ಕಾಲುವೆಗಳೇ ಇಲ್ದೆ ಇರೋಂಥ ಕಡೆಗಳಲ್ಲಿ ನಾವು ಬಂಡ್ವಾಳ ವನ್ನ ಇಂಥದಕ್ಕೆ ಖರ್ಚುಮಾಡಿ ಅಂತ್ಹೇಳಿ... ಈ ಕಡು ಬಡವ್ರಿಗೆ D.I.R. Loan ಕೊಟ್ಟಿದ್ದಾರೆ. ಕಡು ಬಡವ್ನಿಗೆ ಸಾವಿರ ರೂಪಾಯಿ ಕೊಟ್ರೆ, ಅದನ್ನ ತೊಡಗಿಸೋಂಥ ದಿಕ್ಕುಗಳಿರಬೇಕು ಅವ್ನಿಗೆ. ಆ ದಿಕ್ಕುಗಳ್ನ ನಾವು create ಮಾಡಿಕೊಡೋದಿಕ್ಕೆ ಸಾಧ್ಯವಾಗದೆ ಬರಿ ಆರ್ಥಿಕ ಶಕ್ತಿಯನ್ನು ಮಾತ್ರ ಅಲ್ಲಿಗೆ ದಯಪಾಲ್ಸಿದ್ರೆ ಯಾವ ಪ್ರಯೋಜ್ನಾನೂ ಆಗದಿಲ್ಲ. ಎರಡನೇದು ಇದೇ ರೀತಿ, ಏನಾಗತ್ತೆ, ಹಳ್ಳಿಗಳ್ನ ಅಭಿವೃದ್ಧಿ ಮಾಡಬೇಕು ಅಂತ್ಹೇಳಿ ಸರ್ಕಾರದಿಂದ ಒಂದು ಯೋಜನೆ ಹಾಕ್ಕೊಂಡ್ರೆ, ಅಲ್ಲಿರೋರೆಲ್ಲ ಒಂದು ಕೈಗಾರೀಕೃತ ಸಮಾಜದ ಪ್ರತಿನಿಧಿಗಳಾಗಿರುತ್ತಾರೆ. ಅವರೇನ್ಮಾಡ್ತಾರೆ, ತಮ್ಮ ಪೇಟೆಯ ಮತ್ತು ಕೈಗಾರಿಕೆಯ ಅಗತ್ಯಗಳಿಗೆ ಅನುಗುಣವಾದ ರೀತಿಯಲ್ಲಿ ಗ್ರಾಮಗಳನ್ನ ಬೆಳೆಸೋದಕ್ಕೆ ಪ್ರಯತ್ನ ಮಾಡ್ಬಿಡ್ತಾರೆ. ಅಷ್ಟೇ ಹೊರ್ತು ಗ್ರಾಮ ತನ್ನಿಂದ ತಾನೆ ಸ್ವಾಯುತ್ತ ವಾಗಿ ತೊಂದ್ರೆ ಇಲ್ದೇನೆ ಬದುಕೋದಕ್ಕೆ ಏನ್ಮಾಡ್ಬೇಕು ಅಂತ ಯೋಚ್ನೆ ಮಾಡೋ ದಿಲ್ಲ. ಮೂರನೇದು, ಬಂಡ್ವಾಳವನ್ನ, ಬಂಡ್ವಾಳ ಅನ್ನೋ ರೀತಿ ತೊಡಗಿಸೋದೆ ಗೊತ್ತಿಲ್ದೆ ಇರೋ ಜನತೆ ಮೇಲೆ ಬಂಡ್ವಾಳವನ್ನ ತಗೊಂಡ್ಹೋಗಿ ಹಾಕ್ತೀವಿ ನಾವು, ಅದನ್ನ ಕಲಿಸಿಕೊಡೋದಿಕ್ಕೇ ಆಗಲಿ, ಅಥ್ವ ಅದನ್ನ ಅರ್ಥ ಮಾಡಿಸೋಕೆ ಆಗಲಿ ಪ್ರಯತ್ನ ಮಾಡ್ದೇನೇನೆ. ಇದಕ್ಕೆಲ್ಲ, ಈ ತೊಂದ್ರೆಗಳಿಗೆಲ್ಲ, ಏನು ಕಾರಣಾಂದ್ರೆ ಅದದಕ್ಕೆ ಸಂಬಂಧಪಟ್ಟೋರಿಗೆ—ಈಗೊಬ್ಬ ಬರಹಗಾರನಿಗೆ ತನ್ನೆಲ್ಲ

ಪರಿಸರದೊಂದಿಗೆ ಅದರ ವಾಸ್ತವ ತಿಳಿಯೋಹಂಗೆ–ಆರ್ಥಿಕ ತಜ್ಞರಿಗೆ ಆಗ್ಲಿ, ಸಮಾಜಶಾಸ್ತ್ರಜ್ಞರಿಗೆ ಆಗಲಿ, ರಾಜಕೀಯ ತಜ್ಞರಿಗೆ ಆಗಲಿ ಗೊತ್ತಾಗೋದಿಲ್ಲ. ಹಾಗಾಗೋದ್ರಿಂದಾನೆ ಅವ್ರಿಗೆ ಅದರ ವಿಶ್ವರೂಪ ಅರ್ಥಾಗೋದಿಲ್ಲ. ಒಂದು ಸಣ್ಣ ಉದಾಹರಣೆ: ಒಂದಿಷ್ಟು ಕೋಳಿಗಳನ್ನ ಒಂದ್ ರೀತೀಲಿ ಅವನು ಮುಂಚಿನಿಂದ ಸಾಕ್ತಾಯಿರ್ತಾನೆ. ಹೋಗ್ತೀವಿ, ಆ ಕೋಳಿ ಬ್ಯಾಡ, ಈ ಕೋಳಿ ತಗಾ ಅಂತ್ಹೇಳಿ ಬೇರೆ ತರದ್ ಕೋಳಿಗಳ್ನ–ಮೂರು ಸಾವಿರ ರೂಪಾಯ್ನ ಕೋಳಿಗಳ್ನ, ಅದಕ್ಕೆ ಬೇಕಾದ ಬೋನುಗಳ್ನ ಎಲ್ಲ ಕೊಟ್ಟುಬಿಟ್ಟು ಬಂದುಬಿಡ್ತೀವಿ. ಆದ್ರೆ ಆ ಕೋಳೀನೂ, ಬೋನೂ ಅವನ ಜೀವನದಲ್ಲಿ ಯಾವ ರೀತಿ disturb ಮಾಡತ್ತೆ, ಅವ್ನ ಜೀವನ ಕ್ರಮಾನ ಯಾವ ರೀತಿ ಅಸ್ತವ್ಯಸ್ತ ಗೊಳಿಸತ್ತೆ ಅನ್ನೋದನ್ನ study ಮಾಡೋದೇ ಇಲ್ಲ ಈ ಆರ್ಥಿಕ ತಜ್ಞರು. ಹಾಗಾಗಿ ಏನಾಗತ್ತೆ, ಅವನ ಜೀವನಕ್ರಮ ಬದ್ಲಾಯಿಸೋಕೆ ಆಗ್ದೇನೇನೆ ಆ ಕೋಳಿಗಳನ್ನೆಲ್ಲ ಕುಯ್ದು, ತಿಂದು, ಬೋನುಗಳನ್ನೆಲ್ಲ ಮುರ್ದು ಒಲೆಗ್ಹಾಕಿ ಇನ್ನೊಂದ್ಸಾರಿ ಅದನ್ನ ವಾಪಸ್ ಕೊಡೋದೂ ಯೋಚ್ನೆ ಮಾಡ್ದೆನೇನೆ ಕೂತು ಬಿಡ್ತಾನೆ. ಅದ್ರಿಂದ ತನ್ನಲ್ಲಿ... ಈಗಾಗ್ಲೆ ಅನುಷ್ಠಾನದಲ್ಲಿರೋ ಕಾರ್ಯಕ್ರಮ ಗಳನ್ನ ಹೆಚ್ಚು efficient ಮಾಡೋದರಿಂದ, ಹೆಚ್ಚು productive ಮಾಡೋದಕ್ಕೆ ಅವಕಾಶ ಆಗುತ್ತೆ–ವಿಕೇಂದ್ರೀಕರಣದಿಂದ ಅಂತ ಹೇಳಿ ನಾನು ತಿಳಿದಿದೀನಿ... ಇದು ಸೃಜನಶೀಲತೆಯನ್ನ ಬೆಳೆಸಬೌದು ಅಂತ. ಆದ್ರೆ ಇಲ್ಲೀವರ್ಗೂ ಏಷ್ಯಾದಲ್ಲೇ ಆಗಲಿ, ಪ್ರಪಂಚದ ಯಾವ ಭಾಗದಲ್ಲೇ ಆಗಲಿ ಈ ಮಟ್ಟದಲ್ಲಿ ಇದ್ನ experiment ಮಾಡ್ದೆ ಇರೋದ್ರಿಂದ, ನನಗೆ ತಿಳಿದ್ಹಂಗೆ ಮಾಡ್ದೇ ಇರೋದ್ರಿಂದ, ಬಹುಶಃ ನಾವು ಯಾವ ಒಂದು ಉದಾಹರಣೆಯ ಸಹಾಯವೂ ಇಲ್ದೇನೇನೆ ಪ್ರಯತ್ನಮಾಡಿ, ಪ್ರಯತ್ನ ಮಾಡ್ತ, ಅದರಲ್ಲಿರೋ ತಪ್ಪುಗಳನ್ನ ತಿದ್ದಿಕೊಳ್ತ ಈ ದಿಕ್ಕಿನಲ್ಲಿ ಹೋದರೆ ಉದ್ಧಾರವಾಗಬಹುದೇ ಅಂತ್ಹೇಳಿ experiment ಮಾಡಬೇಕಾಗಿದೆ ಅಂತ ಮಾತ್ರ ನನ್ನ ಅಭಿಪ್ರಾಯ.

**ಡಿ.ಎಸ್.ಎನ್ :** ಥ್ಯಾಂಕ್ ಯು ಸರ್.

ಟೇಪಿನಿಂದ ಲಿಪಿಗೆ : **ಶಿವಪ್ಪನಾಯಕ**

(ಕೃಪೆ : ಆಕಾಶವಾಣಿ, ಭದ್ರಾವತಿ)

# ಧರ್ಮ-ಪೂರಕವೋ ಮಾರಕವೋ

ದೇವಿಪ್ರಸಾದ್ ಚಟ್ಟೋಪಾಧ್ಯಾಯ.

ಇಂಗ್ಲೆಂಡಿನ ಮೊದಲನೆ ಚಾರ್ಲ್ಸ್ ದೊರೆಯು ಕೊಲೆಯಾದ ಇಪ್ಪತ್ತು ವರ್ಷಗಳ ನಂತರ; 1669ರಲ್ಲಿ, ಅವನ ವಿಧವೆ ಹೆನ್ರಿಟ್–ಮೇರಿಯ ಮರಣೋತ್ತರ ಕ್ರಿಯೆಯ ಸಂದರ್ಭದಲ್ಲಿ ಫ್ರೆಂಚ್ ಪಾದ್ರಿ ಬೂಸೋ ಮಾಡಿದ ಭಾಷಣ ತನ್ನ ಪ್ರಭಾವಕಾರೀ ನಿಖರತೆಗೆ ಹೇಗೆ ಪ್ರಸಿದ್ಧವೋ ಹಾಗೆಯೇ ಅರಸೊತ್ತಿಗೆಯ ಸಮರ್ಥನೆಗೂ ಹೆಸರಾಗಿದೆ. ಈ ಭಾಷಣದಲ್ಲಿ ಅವನು ಕೆಲವು ವರ್ಷಗಳ ಹಿಂದಿನಿಂದಲೂ ನಡೆಯುತ್ತಿದ್ದ ಸಂಗತಿಗಳ ಬಗ್ಗೆ ಈ ರೀತಿ ಎಚ್ಚರಿಕೆ ನೀಡಿದ :

> "ಮನುಷ್ಯ ತನ್ನ ಬದುಕನ್ನು ತಾನೇ ನಿರ್ಧರಿಸುವೆನೆಂದೂ, ತನಗೆ ಬೇಕಾದ ನಂಬಿಕೆಗಳನ್ನು ತಾನೇ ರೂಪಿಸಿಕೊಳ್ಳಲು ಸಮರ್ಥನೆಂದೂ ತಿಳಿದಿದ್ದಾನೆ. ಈ ಧರ್ಮವಿರೋಧಿ ಎಡಬಿಡಂಗಿತನಗಳನ್ನು ಶಿಕ್ಷಿಸುವುದಕ್ಕಾಗಿಯೇ ಭಗವಂತನು ಅವರಿಗೆ "ವಿವೇಕಶೂನ್ಯ ಕುತೂಹಲದ ತಲೆತಿರುಕತನ"ವನ್ನು ದಯಪಾಲಿಸಿದ್ದಾನೆ. ಆದ್ದರಿಂದಲೇ, ಅವರು ಅರಸೊತ್ತಿಗೆಗೂ ನೀತಿನಿಯಮಗಳಿಗೂ ತಲೆಬಾಗದವರಾಗಿದ್ದಾರೆ ಎಂದಾಗಲೀ, ಒಪ್ಪಿತ ವಿಚಾರಗಳಿಂದ ಸಿಡಿದು ಪ್ರತ್ಯೇಕ ಗುಂಪುಗಳೂ, ದಂಗೆಕೋರರೂ, ಕ್ರಾಂತಿಕಾರಿಗಳೂ ಆಗಿದ್ದಾರೆ ಎಂದಾಗಲೀ ಹೇಳಿದರೆ ಅದರಲ್ಲಿ ಆಶ್ಚರ್ಯಪಡುವಂಥದ್ದೇನಿಲ್ಲ. ಧರ್ಮವು ಮನುಷ್ಯನನ್ನು ನಿಯಂತ್ರಿಸುವಂತಹುದು. ಅದರ ವಿರುದ್ಧ ಹೇಯವಾದ ಕೆಲಸಗಳಲ್ಲಿ ತೊಡಗುವ ನೀವು ಧರ್ಮವನ್ನು ದುರ್ಬಲಗೊಳಿಸಿ ಅದರ ಶ್ರೇಷ್ಠತೆಯನ್ನು ಧ್ವಂಸ ಮಾಡುತ್ತಿದ್ದೀರಿ".

ಈ ಮಾತುಗಳು ನಮಗೆ ಒಪ್ಪಿಗೆಯಾಗಬಹುದು, ಇಲ್ಲದಿರಬಹುದು. ಆದರೆ ಇಲ್ಲಿ ವ್ಯಕ್ತವಾಗಿರುವ ವಿಷಯದ ಸ್ಪಷ್ಟತೆಯ ಬಗ್ಗೆ ಎರಡುಮಾತು ಸಾಧ್ಯವಿಲ್ಲ. ಈ ಮಾತುಗಳಲ್ಲಿ ಪಾದ್ರಿಯು ಧರ್ಮವನ್ನು ಕುರಿತಾದ ವಿವಾದಾಸ್ಪದ ಸೂತ್ರಗಳ ನಿರೂಪಣೆಯನ್ನಾಗಲೀ ಅದರ ನಿಗೂಢ ಅಥವಾ ದೈವೀಪ್ರಭಾವಕ್ಕೆ ಸಂಬಂಧಿಸಿದ ವಿಚಾರಗಳ ಮಂಡನೆಯನ್ನಾಗಲೀ ಮಾಡಿ ನಮ್ಮನ್ನು ಗೊಂದಲಕ್ಕೀಡುಮಾಡು ವುದಿಲ್ಲ. ಧಾರ್ಮಿಕ ವಿಚಾರಣೆಯು ರೂಢಿಯಲ್ಲಿದ್ದ ಕಾಲದಲ್ಲಿ ಅಪಾದಿತರೆಂದು ಪರಿಗಣಿಸಿದವರಿಗೆ ಪೂರ್ವಾಗ್ರಹದಿಂದ ನಿರ್ಧರಿಸಿದ ಶಿಕ್ಷೆಗಳನ್ನೂ ಮರಣದಂಡನೆ ಯನ್ನೂ ದಯಪಾಲಿಸುತ್ತಿದ್ದ 'ಶುದ್ಧ' ಧರ್ಮದ ಪರ ವಕೀಲಿಯನ್ನೂ ವಹಿಸುತ್ತಿಲ್ಲ. ಅವನ ಧರ್ಮ ಸಮರ್ಥನೆಯು ನೇರವಾಗಿ ಅದರ ರಾಜಕೀಯ ಪಾತ್ರವನ್ನು ಕುರಿತದ್ದು. ಧರ್ಮಕ್ಕೆ ಚ್ಯುತಿಯೊದಗಿದರೆ–ಅದರ ಶ್ರೇಷ್ಠತೆಗೆ ಧಕ್ಕೆಯೊದಗಿದರೆ– ಪ್ರಜೆಗಳು ಅಶಾಂತರೂ, ದಂಗೆಕೋರರೂ ಮತ್ತು ಕ್ರಾಂತಿಕಾರಿಗಳೂ ಆಗುತ್ತಾರೆ. ಆದ್ದರಿಂದ ಪ್ರಜೆಗಳನ್ನು ಹದ್ದುಬಸ್ತಿನಲ್ಲಿಡಲು ಧರ್ಮವೇ ಪರಿಣಾಮಕಾರೀ ಅಸ್ತ್ರ ಎನ್ನುವ ದೃಷ್ಟಿಕೋನವನ್ನು ಈ ಪಾದ್ರಿಯು ಖಚಿತವಾದ ಮಾತುಗಳಲ್ಲಿ ನಮ್ಮ ಮುಂದಿಡುತ್ತಾನೆ.

ಧರ್ಮವೆಂದು ಕರೆಯಲಾಗುವ ಅತ್ಯಂತ ಸಂಕೀರ್ಣ ವಿಷಯವನ್ನು ನೋಡುವ ದೃಷ್ಟಿಯು (ಮೇಲಿನಂತೆ) ಇದೊಂದೇ ಅಲ್ಲದಿದ್ದರೂ ಇದನ್ನು ಅಂಗೀಕೃತ ದೃಷ್ಟಿಕೋನವೆನ್ನಬಹುದು. ಈ ಧೋರಣೆಯು ಕೆಲವರಿಗೆ ವ್ಯಕ್ತಿಯ ಆಧ್ಯಾತ್ಮಿಕ ನಂಬಿಕೆಗೆ ಸಂಬಂಧವಿಲ್ಲದಂತೆ ಕಂಡು ರಾಜಕೀಯ ಉದ್ದೇಶಗಳನ್ನು ಈಡೇರಿಸಿ ಕೊಳ್ಳಲು ರೂಪಿತವಾದ "ಸಂಘಟಿತ ಧರ್ಮ" ಅಥವಾ **Regimented religion** ನ ದೃಷ್ಟಿಕೋನದಂತೆ ಕಾಣಬಹುದು.

ಈ ವಿಭಜನೆಗಳು ಸರಿಯೋ ಅಲ್ಲವೋ. ಆದರೆ ಈ ಅಂಶ ನಮ್ಮ ವಿಷಯಕ್ಕೆ ಹೊರತಾದ್ದು. ನಮ್ಮದು ಸರಳವಾದ ವಿಚಾರ. ಸಮಾಜ ಶಾಸ್ತ್ರಜ್ಞರ ದೃಷ್ಟಿ ಯಲ್ಲಿ ಧರ್ಮ ಮತಮೂಲವಾದ್ದು. ಆಗ ಮಾತ್ರ ಅದಕ್ಕೆ ಅಸ್ತಿತ್ವ. ವ್ಯಕ್ತಿಯ ಖಾಸಗಿ ನಂಬಿಕೆಗಳು ಎಲ್ಲಿಯವರೆಗೆ ಸಂಪೂರ್ಣವಾಗಿ ವೈಯಕ್ತಿಕ ನೆಲೆಯಲ್ಲಿ ಮಾತ್ರ ಇರುತ್ತವೆಯೋ ಅಲ್ಲಿಯವರೆಗೆ ಸಮಾಜಶಾಸ್ತ್ರದಲ್ಲಿ ಧರ್ಮಕ್ಕೆ ಸ್ಥಾನವಿಲ್ಲ. ಅವು ಮನೋವಿಜ್ಞಾನಿಯನ್ನೋ ಇತರ ಪಂಡಿತರನ್ನೋ ಆಕರ್ಷಿಸಬಹುದು. ಆದ್ದರಿಂದ ಸಮಾಜಶಾಸ್ತ್ರಜ್ಞನ ಅರ್ಥದಲ್ಲಿ ಧರ್ಮವು–ಸಂಘಟಿತವಾದ್ದೆಂದು ಬೇಕಾದರೂ ಹೇಳಿ ; ಬೇರೆ ಯಾವ ಹೆಸರಿನಿಂದಾದರೂ ಕರೆಯಿರಿ–ನಮ್ಮ ಸದ್ಯದ ಚರ್ಚೆಯ ವಸ್ತುವಾಗಿದೆ. ಈಗ ನಮ್ಮೆದುರಿಗಿರುವ ಪ್ರಶ್ನೆಯೆಂದರೆ–ಧರ್ಮವು ನಮಗೆ ಪೂರಕವೋ ಮಾರಕವೋ ಎಂಬುದು.

ವಿಚಿತ್ರವೆಂದು ಕಾಣುವಂತಿದ್ದರೂ ಮೇಲಿನ ಪಾದ್ರಿಯ ಮಾತುಗಳು ಅವನದೇ ಆದ ಶೈಲಿಯಲ್ಲಿ ನಮ್ಮ ಪ್ರಶ್ನೆಗೆ ಉತ್ತರವನ್ನು ನೀಡುತ್ತವೆ : ಧರ್ಮವು ಪ್ರೇರಕವೂ ಹೌದು ಮಾರಕವೂ ಹೌದು. ವಿರೋಧಾಭಾಸದಂತೆ ತೋರುವ ಈ ಹೇಳಿಕೆಯಲ್ಲಿ ಹುದುಗಿರುವ ದೃಷ್ಟಿಕೋನಗಳು ಯಾವ್ಯಾವುವು ಎನ್ನುವುದನ್ನು ಗುರುತಿಸಿಕೊಂಡ ಪಕ್ಷದಲ್ಲಿ ಇದರ ಅರ್ಥ ಸ್ಪಷ್ಟವಾಗುತ್ತದೆ. ಧರ್ಮದ ಪಾತ್ರ ವನ್ನು ನಿರ್ಣಯಿಸುವ ಎರಡು ಭಿನ್ನದೃಷ್ಟಿಕೋನಗಳಲ್ಲಿ ಒಂದರಂತೆ ಧರ್ಮವು ನಿಜವಾಗಿಯೂ ಸಹಾಯಕವಾದ್ದು. ಮತ್ತೊಂದರಂತೆ ದೊಡ್ಡ ಅಡಚಣೆ. ಹಾಗಾದರೆ ಈ ಎರಡು ಭಿನ್ನ ದೃಷ್ಟಿಕೋನಗಳು ಯಾವುವು ?

ಸರಳವಾದ ಮಾತುಗಳಲ್ಲಿ ಹೇಳುವುದಾದರೆ, ಒಂದು–ಮನುಷ್ಯನನ್ನು ನಿಯಂತ್ರಿಸುವ ದೃಷ್ಟಿಕೋನ. ಎರಡು–ಪ್ರಕೃತಿಯನ್ನು ನಿಯಂತ್ರಿಸುವ ದೃಷ್ಟಿಕೋನ. ಪ್ರಕೃತಿಯ ಬಗ್ಗೆ ಪರಿಜ್ಞಾನವಿದ್ದಾಗ ಮಾತ್ರ ಎರಡನೆಯದು ಸಾಧ್ಯ.

ಪಾದ್ರಿಯ ಮಾತುಗಳು ಹರಳಿನಂತೆ ಸ್ಪಷ್ಟವಾಗಿವೆ. ಮನುಷ್ಯನನ್ನು ಹದ್ದುಬಸ್ತಿನಲ್ಲಿಡಲು ಧರ್ಮವು ಸಹಕಾರಿ ಎಂದು ಅವನು ಹೇಳುತ್ತಾನೆ. ಧರ್ಮದ ಈ ಪಾತ್ರವನ್ನು ಮೊದಲಿಗೆ ಕಂಡುಹಿಡಿದವನು ಬೂಸೋ ಎಂದರೆ ತಪ್ಪಾಗುತ್ತದೆ. ಧರ್ಮದ ಪಾತ್ರ ಏನು ಎನ್ನುವುದು ಸಾಕಷ್ಟು ಹಿಂದೆಯೇ ನಿರ್ಧರಿಸಲ್ಪಟ್ಟಿದೆ. ಪ್ಲೇಟೋ ಧರ್ಮದ ಬಗ್ಗೆ ಹೇಳಿದ ಮಾತುಗಳು ಎಲ್ಲರಿಗೂ ಗೊತ್ತು. ಈಸೋಕ್ರಟಿಸ್, ಪಾಲಿಬಸ್, ಸ್ಟ್ರಬೋ ಕೂಡ ಅದೇ ಮಾತುಗಳನ್ನು ಹೇಳಿದ್ದಾರೆ. ಇವರಲ್ಲಿ ಒಬ್ಬನ ಹೇಳಿಕೆಯನ್ನು ಪರಿಶೀಲಿಸೋಣ.

ಈಸೋಕ್ರಟಿಸ್ ಕ್ರಿ.ಪೂ. 4ನೇ ಶತಮಾನದ ಗ್ರೀಕ್ ತತ್ವಜ್ಞಾನಿ. ಪ್ರಾಚೀನ ಈಜಿಪ್ಟಿನ ಮರಗಟ್ಟಿಸುವ ಧರ್ಮವನ್ನು ಕುರಿತು ಯೋಚಿಸುವಾಗ ಅದರ ನೇರ ರಾಜಕೀಯ ಕಾರ್ಯ ಚಟುವಟಿಕೆಗಾಗಿ ಅದನ್ನು ಅವನು ಪ್ರಶಂಸಿಸುತ್ತಾನೆ. ಅವನು ಹೇಳುವಂತೆ ಈಜಿಪ್ಟಿನ ನ್ಯಾಯಾಧೀಶನು ಎರಡು ಕಾರಣಗಳಿಗಾಗಿ ಧರ್ಮದ ಉಪಯುಕ್ತತೆಯನ್ನು ಮನಗಂಡವನಾಗಿದ್ದ. ಮೊದಲನೆಯದಾಗಿ– "ಹಿರಿಯರು ನೀಡಿದ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸುವ ವ್ಯವಸ್ಥೆಗೆ ಜನರನ್ನು ಒಗ್ಗಿಸಬೇಕಾಗಿತ್ತು" ಎರಡನೆಯದಾಗಿ–"ಎಲ್ಲ ವಿಷಯಗಳಲ್ಲೂ ಕಾನೂನು ಪಾಲನೆಯನ್ನು ಮಾಡುವುದರ ಮೂಲಕ ಭಯಭಕ್ತಿಯನ್ನುಳ್ಳವರು ವಿಶ್ವಾಸಾರ್ಹರು ಎನ್ನುವ ತೀರ್ಮಾನಕ್ಕೆ ಅವನು ಬಂದಿದ್ದ."

ಮತಮೂಲವಾದ ಧರ್ಮವು ನಿಜವಾಗಿಯೂ ಬಯಸಿದ್ದ ನಡವಳಿಕೆಯ

ಮಾದರಿಯೆಂದರೆ ಜನರನ್ನು ವಿಧೇಯತೆಗೆ ಬಗ್ಗಿಸುವುದು–ಮುಗಿದ ಕೈ, ಬಾಗಿದ ಶಿರ, ಮಡಿಸಿದ ಮಂಡಿ ; ತಲೆಹಾಕುವ, ಶರಣಾಗುವ ಭಂಗಿ. ರಾಜರು–ಪ್ರಜೆಗಳು, ಗುಲಾಮರು–ಒಡೆಯರು, ಕೂಲಿಗಳು–ಮಾಲಿಕರು–ಇವರುಗಳ ನಡುವೆ ಇರುವ ನಡವಳಿಕೆಯ ಮಾದರಿಯೂ ಇದೇ ಆಗಿದೆ.

ಧರ್ಮವನ್ನು ದುರ್ಬಲಗೊಳಿಸಿದ, ಅಂತಿಮವಾಗಿ ಇಂಗ್ಲೆಂಡಿನ ಚರಿತ್ರೆಯಲ್ಲೇ ಕೇಳಿರದಂಥ ಕ್ಷೋಭೆಗೆ ಕಾರಣವಾದ ಕೆಲವು ಸಂಗತಿಗಳು ಯೂರೋಪಿನಲ್ಲಿ ಪ್ರಕಟಗೊಂಡವು. ಆದ್ದರಿಂದ ಈ ಪಾದ್ರಿಯು ಹೊಸತಿರುವಿನ ಘಟನೆಗಳಿಗೆ ಮೂಲತಃ ಕಾರಣರಾದವರ ವಿರುದ್ಧ ಅತ್ಯಂತ ತೀಕ್ಷ್ಣವಾಗಿ ಮಾತನಾಡಬೇಕಾಯಿತು. ಹಾಗಾದರೆ, ಈ ಬದಲಾವಣೆಯ ಹರಿಕಾರರು ಯಾರು ?

ಸಾಮಾನ್ಯವಾಗಿ ಎಲ್ಲ ಪುರೋಹಿತರೂ ಅಂದುಕೊಂಡಿರುವಂತೆ ಬೂಸೋ ಕೂಡ ತನ್ನನ್ನು ದೈವಸಂಕಲ್ಪದ ಮಧ್ಯವರ್ತಿಯೆಂದು ತಿಳಿದು. ಆ ಜನರನ್ನು **ವಿವೇಕಶೂನ್ಯ ಕುತೂಹಲದ ತಲೆತಿರುಕತನ**ದ ಶಾಪವಿತ್ತು ದೇವರು ಶಿಕ್ಷಿಸಿದ್ದಾನೆ ಎಂದು ಹೇಳಿದ. ಯೂರೋಪಿನ ಚರಿತ್ರೆಯತ್ತ ಕಣ್ಣು ಹಾಯಿಸಿದರೆ ಇವನು ಯಾರನ್ನು ಕುರಿತು ಈ ಮಾತುಗಳನ್ನಾಡುತ್ತಿದ್ದಾನೆ ಎನ್ನುವುದು ತಿಳಿಯುತ್ತದೆ. ದೇವರ ಶಾಪದಿಂದಲೋ ಅಥವಾ ಗುರುತರವಾದ ಸಾಮಾಜಿಕ ಬದಲಾವಣೆಯ ಪರಿಣಾಮವಾಗಿಯೋ ಪವಿತ್ರಗ್ರಂಥಗಳಲ್ಲಿ ನಿಗದಿಗೊಳಿಸಿದ ಭಯಭಕ್ತಿಯ ಎಲ್ಲೆಯೊಳಗೆ ತಮ್ಮ ಕುತೂಹಲವನ್ನು ತಡೆದುಹಿಡಿಯಲು ನಿರಾಕರಿಸಿದ ಜನ ಯೂರೋಪಿನಲ್ಲಿದ್ದರು. ಆಕಾಶಕಾಯಗಳ ಬಗ್ಗೆ ಕಾನೂನುಬಾಹಿರವಾದ ತಮ್ಮ ಕುತೂಹಲದಿಂದಲೇ ಪಾದ್ರಿಗಳ ಜಗತ್ತನ್ನು ಅಲುಗಾಡಿಸಿದ ಕೋಪರ್‌ನಿಕಸ್ (1473–1543) ಮತ್ತು ಗೆಲಿಲಿಯೋ (1564–1642)–ಇವರುಗಳನ್ನು ಕುರಿತಂತೆ ಆಡಿದ ಮಾತುಗಳಿವು ಎನ್ನುವುದು ಸುಸ್ಪಷ್ಟ. ಆ ಕಾಲದ ಪಾದ್ರಿಗಳಿಗೆ ಇವರನ್ನು ಹೇಗೆ ಸರಿಗಟ್ಟಬೇಕು ಎಂಬುದು ಗೊತ್ತಿರಲಿಲ್ಲ. ಕೋಪರ್‌ನಿಕಸ್ ಸತ್ತನಂತರವೂ ಅವನ ಬಗ್ಗೆ ಕೊಟ್ಟ ತೀರ್ಪುಗಳಲ್ಲಿ ಕೆಲವನ್ನು ನೋಡೋಣ. "ಈ ಮಹಾಮೂರ್ಖ ಖಗೋಳ ವಿಜ್ಞಾನವನ್ನೇ ತಿದ್ದುಪಡಿಮಾಡುತ್ತಿದ್ದಾನೆ. ಆದರೆ ಜೊಷುವಾನ ಆಜ್ಞೆಯಂತೆ ಸ್ಥಾಯಿಯಾದುದು ಭೂಮಿಯಲ್ಲ, ಸೂರ್ಯನೇ ಎಂದು ನಮ್ಮ ಪವಿತ್ರಗ್ರಂಥ ಹೇಳುತ್ತದೆ" ಎಂದು ಲೂಥರ್ ಹೇಳಿದ. ದೈವ ನಿಯಾಮಕ ಶಕ್ತಿಯ ಎದುರು ಕೋಪರ್‌ನಿಕಸ್‌ನ ಮಾತುಗಳನ್ನು ಅಧಿಕೃತವೆಂದು ಘೋಷಿಸುವ ಧೈರ್ಯ ಯಾವನಿಗಿದೆ ?" ಎಂದು ಕಾಲ್ವಿನ್ ಕೇಳಿದ. ಗೆಲಿಲಿಯೋನ ವಿಚಾರಣೆಯಲ್ಲಿ ಪ್ರಮುಖ ಪಾತ್ರವಹಿಸಿದ ಕಾರ್ಡಿನಲ್ ಬೆಲಾರ್ಮಿ

ಈ "ಸುಳ್ಳು ಸಂಶೋಧನೆಯು ಕ್ರಿಶ್ಚಿಯನ್ ಧರ್ಮದ ಮೋಕ್ಷ ತತ್ವವನ್ನೇ ಅಲ್ಲಗಳೆಯುತ್ತದೆ" ಎಂದು ದೂರಿದ.

ಈ ಪಾದ್ರಿಯ ಕೋಪಕ್ಕೆ ಗುರಿಯಾದವರು ಖಗೋಳ ವಿಜ್ಞಾನಿಗಳಷ್ಟೇ ಅಲ್ಲ. ಅಧಿಕಾರದಲ್ಲಿದ್ದ ಪಾದ್ರಿಗಳಿಗೆ ಅಪಾಯಕಾರೀ ಭೌತಿಕತೆಯಾಗಿ ಕಂಡ ನಿಸರ್ಗಾರಾಧನೆಯನ್ನು ಪ್ರತಿಪಾದಿಸಿದ ತತ್ವಜ್ಞಾನಿ ಬ್ರೂನೋ (1548-1600) ನನ್ನು ಕುರಿತು ಬೂಸೋ ಸ್ಪಷ್ಟವಾಗಿ ಹೇಳಿದ್ದು ಇದು :

"ಅವನನ್ನು 17ನೇ ಫೆಬ್ರವರಿ 1600ರಂದು ಪುಷ್ಪೋದ್ಯಾನದಲ್ಲಿ ಜೀವಂತ ಸುಟ್ಟರು. ತನ್ನನ್ನು ಚುಂಬಿಸಲು ಜ್ವಾಲೆಯೊಡನೆ ತೂರಿಬಂದ ಶಿಲುಬೆಯನ್ನು ನೋಡಬಾರದೆಂದು ಬ್ರೂನೋ ಮುಖ ತಿರುಗಿಸಿದ. ವಿಜ್ಞಾನದ ಯುಗ ಪ್ರಾರಂಭವಾಯಿತು". ಪಾದ್ರಿಗಳು ಬಯಸಿದ್ದ ಉದ್ದೇಶಗಳಿಗೆ ತದ್ವಿರುದ್ಧವಾದ ಉದ್ದೇಶಗಳಿಗಾಗಿಯೇ ತಮ್ಮ "ವಿವೇಕ ಶೂನ್ಯ ಕುತೂಹಲ"ವನ್ನು ಪ್ರಕೃತಿ ಯಲ್ಲಿನ ಸಮಸ್ತಕ್ಕೂ ವಿಸ್ತರಿಸಿದ, ಆಧುನಿಕ ವಿಜ್ಞಾನದ ಪ್ರವಾದಿಗಳಾದ ಬೇಕನ್ (1561-1625) ಮತ್ತು ಡಿಕಾರ್ಟೆ (1596-1650) ಬ್ರೂನೋನನ್ನು ಅನುಸರಿಸಿದರು. ಪಾದ್ರಿಗಳು ಮನುಷ್ಯನನ್ನು ತಮ್ಮ ಹತೋಟಿಯಲ್ಲಿಡಲು ಹೆಣಗುತ್ತಿದ್ದ ಸಿದ್ಧಾಂತವೊಂದನ್ನು ಉಳಿಸಿಕೊಳ್ಳಲು ಒದ್ದಾಡುತ್ತಿದ್ದಾಗ ಬೇಕನ್ ಮತ್ತು ಡಿಕಾರ್ಟೆ ಪ್ರಕೃತಿಯನ್ನು ವಿಶ್ಲೇಷಿಸುವ ಮೂಲಕ ಅದರ ಮಿತಿಗಳನ್ನು ದಾಟಿ ಪ್ರಕೃತಿಯ ಮೇಲೆ ತಮ್ಮ ಹಿಡಿತವನ್ನು ಸಾಧಿಸುವ—ಡಿಕಾರ್ಟೆಯ ಮಾತುಗಳಲ್ಲಿ ಹೇಳುವುದಾದರೆ, "ಪ್ರಕೃತಿಯ ಮೇಲೆ ಹಿಡಿತವನ್ನೂ ಸಾರ್ವ ಭೌಮತ್ವವನ್ನೂ ಸ್ಥಾಪಿಸುವಂತೆ ನಾವು ಉನ್ನತಿ ಸಾಧಿಸಬೇಕು" ಎನ್ನುವ— ಹೊಸ ಸಿದ್ಧಾಂತದ ಸಾಧ್ಯತೆಗಳನ್ನು ಕಾಣತೊಡಗಿದ್ದರು.

ಜ್ಞಾನವು ಈ ಹೊಸ ಸಿದ್ಧಾಂತದ ತಳಹದಿ ಎಂದು ಬೇರೆ ಹೇಳಬೇಕಾದ್ದಿಲ್ಲ. ಆದ್ದರಿಂದಲೇ ಜ್ಞಾನವೂ, ಜ್ಞಾನಾರ್ಜನೆಗೆ ಬೇಕಾದ ಕುತೂಹಲವೂ ಪಾದ್ರಿಯ ದೃಷ್ಟಿಯಲ್ಲಿ ಖಂಡನೀಯವಾದದ್ದು. ಧರ್ಮ ಮತ್ತು ವಿಜ್ಞಾನಗಳ ಘರ್ಷಣೆಯು ನಿಖರವಾಗಿ ಎಲ್ಲಿ ಸಂಭವಿಸುತ್ತದೆ ಎನ್ನುವುದನ್ನು ಈಗ ನೋಡುವುದು ಸಾಧ್ಯ. ವಿಜ್ಞಾನವು ಜ್ಞಾನದ ಮೂಲಕ ಪ್ರಕೃತಿಯನ್ನು ನಿಯಂತ್ರಿಸುವ ರಹಸ್ಯವನ್ನು ಕಂಡುಕೊಂಡರೆ, ಧರ್ಮವು ಜ್ಞಾನ ವಿರೋಧಿಯಾಗಿ ನಿಲ್ಲುತ್ತದೆ. ವಸ್ತುಗಳ ನಿಜಸ್ಥಿತಿಯನ್ನು ಅರಿತುಕೊಳ್ಳುವ ಪ್ರಯತ್ನಕ್ಕೆ ವಿರುದ್ಧವಾಗಿ ಪ್ರಜೆಗಳನ್ನು ಯಾವುದರಿಂದ ಹತೋಟಿಯಲ್ಲಿಡಬೇಕು ಎಂಬ ಪಾದ್ರಿಯ ವಿಚಾರಕ್ಕೆ—ಪುಷ್ಟಿ ಕೊಡುತ್ತದೆ. ಧರ್ಮಕ್ಕೆ ಜ್ಞಾನವನ್ನೂ ಅಲ್ಲಗಳೆಯುವುದು ಅವಶ್ಯಕ ಎನ್ನುವ

ತತ್ವಜ್ಞಾನಿಯೊಬ್ಬನ ಮಾತನ್ನು ಈ ಸಂದರ್ಭದಲ್ಲಿ ನೆನಪಿಗೆ ತಂದುಕೊಳ್ಳ ಬಹುದು.

ಈ ಅವಶ್ಯಕತೆಯನ್ನು ನಾವು ಮುಖ್ಯವಾಗಿ ಗಮನಿಸಬೇಕು. ಜ್ಞಾನದ ಬಗ್ಗೆ ಇರುವ ಈ ವಿರೋಧವು ತನ್ನ ಸಂರಕ್ಷಣೆಗಾಗಿ ಮಠಮೂಲ ಧರ್ಮವು ಹೂಡಿದ ತಂತ್ರವಾಗಿದೆ. ತನ್ನ ಸುತ್ತ ಕಪ್ಪು ಮಸಿಯನ್ನು ಹರಡಿ ಆ ಮಬ್ಬಿನಲ್ಲಿ ತನ್ನನ್ನು ಸಂರಕ್ಷಿಸಿಕೊಳ್ಳುವ ಮೀನಿನಂತೆ (cuttle fish) ಕತ್ತಲು ಆವರಿಸಿದ ಪ್ರಪಂಚ ದಲ್ಲಿ ಮಾತ್ರ ಧರ್ಮವು ತಾನು ಸುರಕ್ಷಿತವಾಗಿದ್ದೇನೆಂದು ಭಾವಿಸುತ್ತದೆ.

ಭಾರತದಲ್ಲಿ ಪುರೋಹಿತವರ್ಗದ ಪಠ್ಯಪುಸ್ತಕಗಳಾಗಿದ್ದ **ಬ್ರಾಹ್ಮಣಗಳೆಂಬ** ವಿಪುಲ ಸಾಹಿತ್ಯರಾಶಿಯಿತ್ತೆಂಬುದು ಎಲ್ಲರಿಗೂ ತಿಳಿದ ವಿಷಯ. ಈ **ಬ್ರಾಹ್ಮಣಗಳಲ್ಲಿ** ಸಾಮಾನ್ಯವಾಗಿ ಪುನರಾವರ್ತನೆಯಾಗುವ ಒಂದು ಪ್ರಣಾಳಿಕೆಯಿದೆ: **'ಪರೋಕ್ಷ-ಪ್ರಿಯಾ ಇವ ಹಿ ದೇವಾ'** ಅಥವಾ **'ಪರೋಕ್ಷ-ಕಾಮಾ ಇವ ಹಿ ದೇವಾ'**. ಆಧುನಿಕ ಪಂಡಿತರು ಇದನ್ನು ಸಾಮಾನ್ಯವಾಗಿ **'ದೇವರುಗಳು ಪರೋಕ್ಷ ವಾದ್ದನ್ನು ಇಷ್ಟಪಡುತ್ತಾರೆ'** ಅಥವಾ **'ದೇವರುಗಳು ನಿಗೂಢವಾದ್ದನ್ನು ಇಷ್ಟಪಡುತ್ತಾರೆ'** ಎಂದು ಭಾಷಾಂತರಿಸುತ್ತಾರೆ. **ಬ್ರಾಹ್ಮಣ** ಗ್ರಂಥಗಳಲ್ಲಿ ಈ ಶ್ಲೋಕದ ಅರ್ಥವನ್ನು ತಿರುಚಿ ಬಾಲಿಶವಾಗಿ ವಿವರಿಸುವ ಅಥವಾ ಚಿರಪರಿಚಿತ ಶಬ್ದಗಳಿಗೆ ಅಸಂಗತ ಅರ್ಥಗಳನ್ನು ಬೇಕೆಂದೇ ಸೃಷ್ಟಿಸುವ ಪ್ರಯತ್ನಗಳು ಸಾಮಾನ್ಯವಾಗಿ ಕಂಡುಬರುತ್ತವೆ. ಕಾಲದ ದೃಷ್ಟಿಯಿಂದ ಇತ್ತೀಚಿನವನಾದ ಯಾಜ್ಞವಲ್ಕನು ಈ ಪುರೋಹಿತ ಪ್ರಣಾಳಿಕೆಗೆ ಒಂದು ರೀತಿಯ ಸ್ಪಷ್ಟತೆಯನ್ನು ನೀಡಬೇಕಾದ ಅಗತ್ಯವನ್ನು ಮನಗಂಡ. ಆದರೆ ಮೊದಲು ಹೇಳಿದ್ದನ್ನೇ ಒತ್ತಿ ಹೇಳುವುದರ ಜೊತೆಗೆ ವಿವರಣಾತ್ಮಕವಾದ ಒಂದೆರಡು ಮಾತುಗಳನ್ನು ಅದಕ್ಕೆ ಸೇರಿಸಿ, **"ದೇವರುಗಳು ಪರೋಕ್ಷವಾದ್ದನ್ನು ಇಷ್ಟಪಡುತ್ತಾರೆ., ಅವರು ಪ್ರತ್ಯಕ್ಷ ಜ್ಞಾನವನ್ನು (ಪ್ರತ್ಯಕ್ಷ-ದ್ವಿಸಾಃ) ದ್ವೇಷಿಸುತ್ತಾರೆ"** ಎಂದ ಹೇಳಿದ. ಪ್ರತ್ಯಕ್ಷ-ಲೌಕಿಕ-ಜ್ಞಾನದ ಬಗ್ಗೆ ದೇವರುಗಳಿಗಿರುವ ಅಸಹನೆಯನ್ನು ತಿಳಿಯ ಪಡಿಸುವ ಈ ಸ್ಥೂಲ ವಿವರಣೆಯು ಪುರೋಹಿತ ಪ್ರಣಾಳಿಕೆಗೆ ಒಂದು ಹೊಸ ಆಯಾಮವನ್ನು ನೀಡಿತು. ಫ್ರೆಂಚ್‌ಪಾದ್ರಿ ಬೂಸೋ ಸಹ ಈ ನಿಲುವನ್ನು ಸ್ವಾಗತಿಸಲು ಅತ್ಯುತ್ಸಾಹ ತೋರುತ್ತಿದ್ದನೆಂಬುದರಲ್ಲಿ ಸಂಶಯವಿಲ್ಲ. ವಿಜ್ಞಾನ ವನ್ನು ಅಥವಾ ಲೌಕಿಕ ಜ್ಞಾನವನ್ನು ಅಲ್ಲಗಳೆಯುವ ಈ ವಿಧಾನವು ಮೆಚ್ಚುವಂಥದ್ದೇ.

ಆಧುನಿಕ ವಿಜ್ಞಾನವು ಮೊಳಕೆಯೊಡೆದ ಸಂದರ್ಭದಲ್ಲಿ ಯೂರೋಪಿನಲ್ಲಿ

ಏನು ನಡೆಯಿತು ಎನ್ನುವುದರತ್ತ ಮತ್ತೆ ಯೋಚಿಸೋಣ. ಜ್ಞಾನದ ಬೆಳಕು ಮತ್ತು ಧರ್ಮದ ಅಂಧಕಾರ–ವಿಜ್ಞಾನ ಮತ್ತು ಧರ್ಮ–ಇವುಗಳ ನಡುವೆ ಘರ್ಷಣೆ ಮುಂದುವರೆಯುತ್ತಿತ್ತು. ಬ್ರೂನೋ ಸತ್ತ ಒಂದು ಶತಮಾನದ ನಂತರವೂ ಡಿಡೆರೋ (1713–1784) ಜಗತ್ತಿಗೆ ವಿಜ್ಞಾನವನ್ನು ಕೊಟ್ಟ ತತ್ವ ಪ್ರಣಾಲಿಯನ್ನು ಸಮರ್ಥಿಸುತ್ತಾ, ಪಾದ್ರಿಗಳ ಟಿಪಿಕಲ್ ಸಂರಕ್ಷಣಾ ತಂತ್ರದ ವಿರುದ್ಧ ಸಮರ ಸಾರಿದ.

> "ಕತ್ತಲಿಗೆ ಅಭ್ಯಾಸವಾಗಿ ಹೋಗಿರುವವರಿಗೆ ಸತ್ಯದ ಬೆಳಕು ಕೆಡುಕಾಗಿ ಕಾಣುತ್ತದೆ. ಅವರಿಗೆ ಬೆಳಕನ್ನು ತೋರುವುದೆಂದರೆ ಗೂಬೆಗಳ ಗೂಡಿಗೆ ಸೂರ್ಯನ ಕಿರಣವನ್ನು ಹಾಯಿಸಿದಂತೆ ; ಬೆಳಕು ಅವರ ಕಣ್ಣನ್ನು ಕುಕ್ಕುತ್ತದೆ, ನರಳಿಕೆಯ ನೋವನ್ನು ತರುತ್ತದೆ"

ಅಂದರೆ ಪುರೋಹಿತ ವರ್ಗವನ್ನು ಆತಂಕಕ್ಕೀಡುಮಾಡುವ, ಚುಚ್ಚುವ ಯಾವುದೋ ಅಂಶ ವಿಜ್ಞಾನದಲ್ಲಿದೆ ಎಂದಾಯಿತು. ಹಾಗಾದರೆ ಅದು ಏನು ? ಮೊದಲನೆಯದಾಗಿ, ವಿಜ್ಞಾನವು ಪ್ರಪಂಚದ ನಿಜ ಸ್ವರೂಪ ಏನು ಎಂದು ತಿಳಿಸುತ್ತದೆ. ಅದು ಮನುಷ್ಯನ, ದೇಶಗಳ ಅಸ್ತಿತ್ವ ಹಾಗೂ ಇತಿಹಾಸವನ್ನು ಹೇಳುವಂತೆಯೇ ನಕ್ಷತ್ರ, ಸೂರ್ಯ, ಚಂದ್ರ–ಈ ಆಕಾಶಕಾಯಗಳ ಬಗ್ಗೆಯೂ ಅಂಶವನ್ನು ನೀಡುತ್ತದೆ. ಎರಡನೆಯದಾಗಿ, ಇವೆಲ್ಲವೂ ಕೂಡ ವಿಜ್ಞಾನದಲ್ಲಿ ಪ್ರಭಾವಶಾಲಿ ಪಾತ್ರ ವಹಿಸುವಂತಹವು. ಆದ್ದರಿಂದ ವಿಜ್ಞಾನವು ನಮ್ಮಿಂದ ಬದಲಾದ ನಡವಳಿಕೆಯ–ಮಾದರಿಯನ್ನು ನಿರೀಕ್ಷಿಸುತ್ತದೆ. ನಾವು ಹಿಂದಿನದಕ್ಕಿಂತ ಉತ್ತಮವಾದ್ದನ್ನ ಅರಿಸಬೇಕು ಮತ್ತು ಉತ್ತಮತರ ಕಾರ್ಯ ಚಟುವಟಿಕೆಗಳಲ್ಲಿ ತೊಡಗಬೇಕು. ಆದರೆ ಪುರೋಹಿತವರ್ಗ ಸ್ಟೀರಿಯೋ ಟೈಪ್ ಮಾದರಿಯನ್ನು ಹೇರುತ್ತದೆ : ನಿಮ್ಮ ಪೂರ್ವಜರು ನಡೆದುಕೊಳ್ಳುತ್ತಿದ್ದ ರೀತಿಯಲ್ಲಿಯೇ ನೀನು ನಡೆಯಬೇಕು ; ನಿಮ್ಮ ಮಕ್ಕಳು ಈ ನಡವಳಿಕೆಯ–ಮಾದರಿಯಿಂದ ವಿಚಲಿತರಾಗದಂತೆ ಎಚ್ಚರವಹಿಸಬೇಕು. ಆದರೆ ನಮ್ಮ ಪೂರ್ವಜರ ನಡವಳಿಕೆಯ ಮಾದರಿ ಹೇಗಿತ್ತು ? ಪ್ರತ್ಯಕ್ಷ ಪ್ರಪಂಚದ ಮೇಲೆ ಪ್ರಭಾವವನ್ನು ಬೀರುವ ಪ್ರತ್ಯಕ್ಷ ನಿಯಮಗಳ ಬಗ್ಗೆ ಅವರ ತಿಳುವಳಿಕೆ ಶೂನ್ಯವೇನೋ ಎನ್ನುವಷ್ಟು ಅಪೂರ್ಣವಾಗಿತ್ತು ಅಥವಾ ತೀರ ಮೇಲುಮೇಲಿನದಾಗಿತ್ತು. ಇದರಿಂದಾಗಿ ಈ ಜಗತ್ತನ್ನು ಪರಿಣಾಮಕಾರಿಯಾಗಿ ಹೇಗೆ ಪರಿವರ್ತಿಸಬೇಕು ಎನ್ನುವುದು ಅವರಿಗೆ ತಿಳಿಯುವುದು ಸಾಧ್ಯವಿರಲಿಲ್ಲ. ಆದರೆ ಅವರಿಗೆ ಸಾಧ್ಯವಿದ್ದ–ವಸ್ತುಸ್ಥಿತಿಯಲ್ಲಿ ಹೀಗೆ ಮಾಡಬೇಕೆಂದು ವಿಧಿಸಿದ್ದ–ಒಂದೇ ಕೆಲಸವೆಂದರೆ ಕೇವಲ ಸಂತುಷ್ಟಿಕ್ರಿಯೆ

ಗಳು ಪ್ರಾರ್ಥನೆಗಳಿಂದಷ್ಟೇ ಅಲ್ಲದೆ ದಕ್ಷಿಣೆಯನ್ನೊಪ್ಪಿಸುವ ಮತ್ತು ದಾನಕ್ರಿಯೆಗಳನ್ನು ಮಾಡುವ ಮೂಲಕ ವಾಸ್ತವಿಕತೆಯ ಬಗೆಗೆ ತಮ್ಮ ವೈಯಕ್ತಿಕ ದೃಷ್ಟಿಕೋನವನ್ನು ಬದಲಾಯಿಸಿಕೊಳ್ಳುವುದು. ದೇವರುಗಳು ಈ ದಕ್ಷಿಣೆ ಮುಂತಾದವುಗಳನ್ನು ಪ್ರತ್ಯಕ್ಷವಾಗಿ ಸ್ವೀಕರಿಸಲು ಸಾಧ್ಯವಿಲ್ಲದಿದ್ದರೂ ಲೌಕಿಕ (ಪ್ರತ್ಯಕ್ಷ) ಪ್ರಪಂಚದಲ್ಲಿ ದೇವರ ಪ್ರತಿನಿಧಿಗಳಾದ ಪುರೋಹಿತರು ಈ ಜವಾಬ್ದಾರಿಯನ್ನು ಹೊತ್ತು ಸಂತುಷ್ಟರಾಗುತ್ತಿದ್ದರು.

ಆವರಿಸಿದ ಕತ್ತಲಿನ ಆಸರೆಯಲ್ಲಿ ತನ್ನನ್ನು ರಕ್ಷಿಸಿಕೊಳ್ಳಬಯಸುವ ಮತಮೂಲ ಧರ್ಮವು ಕೆಲವರಿಗೆ ಲಾಭದಾಯಕವೂ ಆಗಿತ್ತು. ಪ್ರಾಚೀನ ಭಾರತದಲ್ಲಿ ಚಾರ್ವಾಕರು ಹೇಳಿದಂತೆ, ಧರ್ಮಗ್ರಂಥಗಳಲ್ಲಿ ಉಲ್ಲೇಖವಾಗಿರುವ ವಿಷಯಗಳು ಬುದ್ಧಿಹೀನರೂ ಬಲಹೀನರೂ (**ಬುದ್ಧಿ-ಪೌರುಷ-ಹೀನಾ**) ಆದವರಿಗೆ ಹೊಟ್ಟೆಹೊರೆದುಕೊಳ್ಳುವ ಮಾರ್ಗವನ್ನು ಕುರಿತದ್ದಾಗಿವೆ.

ಚಾರ್ವಾಕರನ್ನೇನೋ ಹೊಸಕಿ ಹಾಕಲಾಯಿತು. ಮಹಾಭಾರತದಲ್ಲಿ ಪವಿತ್ರ ಬ್ರಾಹ್ಮಣರು ಹೇಗೆ ಚಾರ್ವಾಕನೊಬ್ಬನನ್ನು ಜೀವಂತ ಸುಟ್ಟರು ಎಂಬ ಕತೆಯಿದೆ. ಈ ಕತೆಯ ಹಿನ್ನೆಲೆಯಲ್ಲಿ ಏನಿದ್ದಿರಬಹುದೆಂದು ನಮಗೆ ಗೊತ್ತಿಲ್ಲ. ಆದರೆ ಪುರೋಹಿತ ವ್ಯವಸ್ಥೆ ಹಾಗೂ ಪುರೋಹಿತವರ್ಗದ ಸಾಹಿತ್ಯವಾದ-ಹಿಂದೂ ನ್ಯಾಯ ಗ್ರಂಥ ಸಮೂಹ-ಧರ್ಮಶಾಸ್ತ್ರವು ಈ ನಿರೀಶ್ವರವಾದಿಗಳಿಗಿರಲಿ, ಆಧ್ಯಾತ್ಮಿಕ ವಿಚಾರಗಳ ಬದಲು ವೈಚಾರಿಕತೆ ಮತ್ತು ಅನುಭವಗಳಿಗೆ ಹೆಚ್ಚು ಪ್ರಾಮುಖ್ಯತೆಯನ್ನು ಪ್ರತಿಪಾದಿಸಿದ ಪ್ರಾಚೀನ ತಾರ್ಕಿಕರ ಮೇಲೂ ಉಗ್ರವಾದ ಕ್ರಮವನ್ನು ಕೈಕೊಂಡದ್ದು ನಮ್ಮ ಕುತೂಹಲವನ್ನು ಕೆರಳಿಸುತ್ತದೆ.

ವಿಜ್ಞಾನದ ಬೆಳವಣಿಗೆಗೆ ಮೂಲಾಧಾರವಾದ ಪ್ರತ್ಯಕ್ಷ ಜ್ಞಾನದ ಸಮರ್ಥನೆಯು ಪುರೋಹಿತ ವರ್ಗವು ವ್ಯವಸ್ಥೆಯಿಂದ ಪಡೆದುಕೊಂಡಿದ್ದ ಸುರಕ್ಷತೆ ಮತ್ತು ಸುಖಜೀವನಕ್ಕೆ ಆತಂಕಕಾರಿಯಾಗಿತ್ತು. ಆಗಿನ ತತ್ವಜ್ಞಾನಿಗಳಿಗಿದ್ದ ದುರ್ದೈವ್ಯವಾದ ಒಂದೇ ಆಯ್ಕೆಯೆಂದರೆ ಸುಳ್ಳು ಹೇಳಿ ಬಹುಮಾನ ಪಡೆಯುವುದು ಇಲ್ಲ ಸತ್ಯ ಹೇಳಿ ಶಿಕ್ಷೆಗೊಳಗಾಗುವುದು. ಪುರೋಹಿತರು ಮಾತ್ರವೇ ಈ ಪರಿಸ್ಥಿತಿಗೆ ಕಾರಣರಾಗಿರಲಿಲ್ಲ. ಈ ಪುರೋಹಿತರ ಹಿಂದೆ ನ್ಯಾಯ ವಿಚಾರಣೆಯನ್ನು ಕೈಗೊಳ್ಳುತ್ತಿದ್ದ ಶಕ್ತಿಗಳಿದ್ದವು. ಈ ಶಕ್ತಿಗಳ ಹಿಂದೆ ಜನಸಮುದಾಯವನ್ನು ಗುಲಾಮರಂತೆ ಹಿಡಿದಿಟ್ಟುಕೊಳ್ಳಲು ಬಯಸುತ್ತಿದ್ದ ರಾಜಕೀಯ ಶಕ್ತಿಗಳಿದ್ದವು.

ಇದನ್ನೆಲ್ಲ ಐತಿಹಾಸಿಕವಾಗಿ ಗಮನಿಸಿದಾಗ ಆಧುನಿಕ ವಿಜ್ಞಾನಕ್ಕಾಗಿ ನಡೆದ ಹೋರಾಟವೂ ಆಧುನಿಕ ಪ್ರಜಾಪ್ರಭುತ್ವಕ್ಕಾಗಿ ನಡೆದ ಹೋರಾಟವೂ ಒಂದೇ ಆಗಿರುವ ವಿಷಯವು ಆಕಸ್ಮಿಕವಾದ ಘಟನೆಯಾಗಿ ಕಾಣುವುದಿಲ್ಲ. **ಒಂದೇ ಆಗಿರುವ (coincide)** ಎಂಬ ಶಬ್ದವು ಬಹುಶಃ ಈ ಸಂದರ್ಭದಲ್ಲಿ ಸೂಕ್ತವಾಗಿ ಕಾಣದಿರಬಹುದು. ತಾರ್ಕಿಕವಾಗಿ ಕೂಡ ವಿಜ್ಞಾನದ ಬೆಳವಣಿಗೆಗೂ ಪ್ರಜಾಪ್ರಭುತ್ವದ ಬೆಳವಣಿಗೆಗೂ ಇರುವ ಸಂಬಂಧವನ್ನು ನಿರೂಪಿಸಲಾಗಿದೆ. ವಿಜ್ಞಾನವು ಬಯಸುವ ಜ್ಞಾನವು ವಿಶ್ವವ್ಯಾಪಿ ಮಾತ್ರವೇ ಆಗಿರದೆ ದೇಶ ಭಾಷೆಗಳ ಗಡಿಯನ್ನು ದಾಟಿ ಮನುಷ್ಯನ ಪ್ರತ್ಯಕ್ಷ ಅನುಭವದ ಪ್ರಪಂಚಕ್ಕೆ ಸೇರಿದ್ದು. ಆದ್ದರಿಂದ ವಿಜ್ಞಾನವಿಲ್ಲದೆ ಪ್ರಜಾಪ್ರಭುತ್ವವಿಲ್ಲ ಎಂದು ಹೇಳುವ ಹಾಗೆಯೇ ನಿಜವಾದ ಪ್ರಜಾಪ್ರಭುತ್ವವಿಲ್ಲದೆ ನಿಜವಾದ ವಿಜ್ಞಾನವಿರುವುದು ಸಾಧ್ಯವಿಲ್ಲ ಎನ್ನಬಹುದು.

ವಿಜ್ಞಾನವು ಸಾಧ್ಯಗೊಳಿಸಿದ ಈ ಆಶಾವಾದಕ್ಕೆ ಸಮಕಾಲೀನ ಸನ್ನಿವೇಶದಲ್ಲಿ ಒದಗಿರುವ ವಿಪತ್ತು ಎಂತಹುದು? ವೈಜ್ಞಾನಿಕ ಸಂಶೋಧನೆಗಳಿಂದಾಗಿ ಪ್ರಕೃತಿಯ ಮೇಲಿನ ಮನುಷ್ಯನ ನಿಯಂತ್ರಣವು ಹೆಚ್ಚಿ ಕೈಗಾರಿಕಾ ಉತ್ಪನ್ನಗಳು ಅಧಿಕಗೊಳ್ಳುತ್ತಿದ್ದ ಮತ್ತು ವ್ಯಾಪಾರೋದ್ಯಮವು ವಿಸ್ತರಿಸುತ್ತಿದ್ದ ಕಳೆದ ಶತಮಾನದವರೆಗೂ ಈ ಆಶಾವಾದಕ್ಕೆ ಧಕ್ಕೆ ಬಂದಿರಲಿಲ್ಲ. ಆದರೆ ಮೊದಲನೆ ಮಹಾ ಯುದ್ಧವೂ ಮತ್ತು ನಂತರ ಉಂಟಾದ ಗಂಭೀರ ಸ್ವರೂಪದ ಆರ್ಥಿಕ ಬಿಕ್ಕಟ್ಟಿನ ಸಂದರ್ಭಗಳೂ ಪಾಶ್ಚಾತ್ಯದೇಶಗಳಲ್ಲಿ ಈ ಆಶಾವಾದವನ್ನು ಅಲುಗಾಡಿಸಿ ಬಿಟ್ಟವೆ. ಈ ಕಾರಣದಿಂದಲೇ ಅನೇಕ ಮಧ್ಯಮ ವರ್ಗದ ಲೇಖಕರಲ್ಲಿ ಸಿಡುಕುತನ, ನಿರಾಶಾವಾದಗಳಷ್ಟೇ ಅಲ್ಲದೆ ಅನುಭಾವವಾದ ಹಾಗೂ ಧಾರ್ಮಿಕ ಪುನರುಜ್ಜೀವನದ ಪ್ರಯತ್ನಗಳೂ ಕಂಡುಬರುತ್ತವೆ.

ಈ ಸನ್ನಿವೇಶದಲ್ಲಿ ವಿಜ್ಞಾನ ಮತ್ತು ಪ್ರಜಾಪ್ರಭುತ್ವಗಳಿಗೆ ಸಂಬಂಧಿಸಿದ ಪ್ರಶ್ನೆಯು ಪ್ರಮುಖವಾಗುತ್ತದೆ. ಪ್ರಜಾಪ್ರಭುತ್ವ ಎನ್ನುವ ಪದ ಬೇಕಾಬಿಟ್ಟಿಯಾಗಿ ಬಳಕೆಯಾಗಿದೆ ಎನ್ನುವುದರಲ್ಲಿ ಅನುಮಾನವಿಲ್ಲ. ಪ್ರಪಂಚದ ನಾನಾ ಭಾಗಗಳಲ್ಲಿನ ಜನಸಮುದಾಯಗಳ ಕಾರ್ಯಚಟುವಟಿಕೆಗಳನ್ನು ದಮನಗೊಳಿಸುವ ಸಾಮ್ರಾಜ್ಯಶಾಹಿಯನ್ನು ಕೂಡ ಪ್ರಜಾಪ್ರಭುತ್ವವೆಂದೇ ಕರೆದುಕೊಳ್ಳುತ್ತಾರೆ. ವೈಜ್ಞಾನಿಕ ಸಮಾಜವಾದದ ಹೊಸ ರೂಪದಲ್ಲಿ ಅಸ್ತಿತ್ವವನ್ನು ಪಡೆದುಕೊಂಡಿರುವ ಪ್ರಜಾಪ್ರಭುತ್ವ ನಮಗೆ ಮುಖ್ಯವಾಗಿದೆ. ಇಂತಹ ಪ್ರಜಾಪ್ರಭುತ್ವದಲ್ಲಿ ಆಹಾರ, ಆರೋಗ್ಯ ಮತ್ತು ಶಕ್ತಿ (Energy) ಮುಂತಾದ ಮನುಷ್ಯನ ಪ್ರಾಥಮಿಕ ಸಮಸ್ಯೆಗಳನ್ನು ವಿಜ್ಞಾನದ ಸಹಾಯದಿಂದ ಬಗೆಹರಿಸಲು ಸಾಧ್ಯವಾದೀತು.

ಅಷ್ಟೇ ಅಲ್ಲದೆ ವಿಜ್ಞಾನದ ಯೋಜನಾಬದ್ಧ ಪ್ರಗತಿಯು ಮಾರಕಾಸ್ತ್ರಗಳ ಭೀತಿಯಿಂದ ಮನುಷ್ಯನನ್ನು ಮುಕ್ತಗೊಳಿಸಬಲ್ಲದು. ಆದರೆ ಪುರಾಣಗಳು ಮತ್ತು ಸುಳ್ಳುಗಳ ಅಂಧಕಾರದಲ್ಲಿ ತನ್ನನ್ನು ರಕ್ಷಿಸಿಕೊಳ್ಳಲು ಕೊನೆಯುಸಿರೆಳೆಯುತ್ತಿರುವ ಧರ್ಮವು ಹೋರಾಡುತ್ತಿದೆ. ನಮ್ಮ ಫ್ರೆಂಚ್‌ಪಾದ್ರಿಯು ಅರಸೊತ್ತಿಗೆಯನ್ನು ಸಮರ್ಥಿಸಿದ ಭಾಷಣದಲ್ಲಿನ ಅಂಧಕಾರದ ರೂಪಕ್ಕೂ ಇಲ್ಲಿನದಕ್ಕೂ ವ್ಯತ್ಯಾಸವಿದೆ ಎನ್ನಬಹುದಾದರೂ ಈ ಅಂಧಕಾರವನ್ನು ನಿವಾರಿಸದೆ ಪ್ರಗತಿ ಸಾಧ್ಯವಿಲ್ಲ.

ಅನು : ಗಂಗಾಧರಮೂರ್ತಿ.

# ಮದುವೆಯ ನಡುವೆ ಮರಣವಡ್ಡ ಬಿದ್ದಿತಲ್ಲಾ: ಮೀಡಿಯ

ಕಿ. ರಂ. ನಾಗರಾಜ್

ಯುರಿಪಿಡಿಸ್ ಮಹಾಕವಿಯ 'ಮೀಡಿಯ' ಜಗತ್ತಿನ ಪ್ರಖ್ಯಾತ ದುರಂತ ನಾಟಕಗಳಲ್ಲಿ ಒಂದು. ಅಲ್ಲದೆ ಯುರಿಪಿಡಿಸ್ ದುರಂತ ನಾಟಕಕಾರರಲ್ಲೇ ಹೆಚ್ಚು ದುರಂತಮಯ ನಾಟಕಕಾರ ಎನಿಸಿಕೊಂಡಿದ್ದಾನೆ. ಮನುಷ್ಯನ ಮನಸ್ಸಿನ ತೀವ್ರ ಅವಸ್ಥಾಂತರಗಳನ್ನು, ಬರ್ಬರ ಪರಕೀಯತೆಯ ತೊಳಲಾಟ, ಪ್ರೇಮದ ವಿವಂಚನೆಯ ತಾತ್ವಿಕ ವ್ಯಾಖ್ಯೆಯನ್ನು, ಈ ನಾಟಕ ಒಳಗೊಂಡಿದೆ. ಈ ನಾಟಕ ಇಂದಿಗೂ ಸಾಹಿತ್ಯಾಭ್ಯಾಸಿಗಳನ್ನು, ನಟರನ್ನು, ನಿರ್ದೇಶಕರನ್ನು ಹಾಗೂ ಪ್ರೇಕ್ಷಕರನ್ನು ಆಕರ್ಷಿಸುತ್ತ ಬಂದಿದೆ.

ತನ್ನ ಸ್ವಾರ್ಥಸಾಧನೆಯ ಒಂದು ಭಾಗವಾಗಿ ಜೇಸನ್ ಮೀಡಿಯಳನ್ನು ಬಿಟ್ಟು ರಾಜಕುವರಿ ಕ್ರ್ಯೂಸಳನ್ನು ಮದುವೆಯಾಗುತ್ತಾನೆ. ಇದಕ್ಕೆ ಪ್ರತೀಕಾರ ವಾಗಿ 'ಮೀಡಿಯ' ರಾಜಕುವರಿಯನ್ನು ವಿಷದ ಉಡುಗೆಗಳನ್ನು ಬಹುಮಾನ ಕೊಡುವುದರ ಮೂಲಕ ಕೊಲ್ಲುತ್ತಾಳೆ. ಮಗಳನ್ನು ರಕ್ಷಿಸುವ ಪ್ರಯತ್ನದಲ್ಲಿ ಕ್ರೆಯೋನ್ ಭೀಕರ ಸಾವಿಗೆ ಗುರಿಯಾಗುತ್ತಾನೆ.

ಜೇಸನ್-ಕ್ರೆಯೋನ್ ಇವರ ಬರ್ಬರ ಸ್ವಾರ್ಥ ಹಾಗೂ ಮೀಡಿಯಳಲ್ಲಿ ಹುಟ್ಟಿದ ಅದಮ್ಯ ಪ್ರೀತಿ, ತಾಯ್ನಾಡಿನ ಒಲವು ಪರಸ್ಪರ ಘರ್ಷಣಾ ಕೇಂದ್ರ ವನ್ನು ನಾಟಕದಲ್ಲಿ ರೂಪಿಸಿದೆ. ಸ್ವಾರ್ಥ-ಪ್ರತೀಕಾರಗಳ ನೆಲೆ ಬದುಕನ್ನು, ಸಂಸ್ಕೃತಿಯನ್ನು ಹೇಗೆ ತಲ್ಲಣಗೊಳಿಸುತ್ತದೆ ಎಂಬುದನ್ನು ಯುರಿಪಿಡಿಸ್ ಈ ನಾಟಕದ ಮೂಲಕ ಹೇಳುತ್ತಿದ್ದಾನೆ; ಅಲ್ಲದೆ ಬರ್ಬರ ಸ್ವಾರ್ಥ ಅದಕ್ಕೆ ಪ್ರತಿಯಾಗಿ ಪ್ರತೀಕಾರ ಇವುಗಳನ್ನು ಒಂದು ಸಂಸ್ಕೃತಿಯಾಗಲೀ, ಧರ್ಮ ವಾಗಲಿ, ಸಂಸ್ಥೆಯಾಗಲಿ ನಿಯಂತ್ರಿಸದಿದ್ದಲ್ಲಿ ಮನುಷ್ಯ ಮನುಷ್ಯರ ನಡುವಣ

( ... ತ-ಹೆಣ್ಣುಗಳ ನಡುವಣ) ಅಂತರ್‌ಯುದ್ಧದಲ್ಲಿ ಪರ್ಯವಸಾನಗೊಳ್ಳುತ್ತ
ದೆ ... ವ್ಯಾಪಕ ಧ್ವನಿ ಈ ನಾಟಕದಲ್ಲಿ ಅನುರಣನಗೊಂಡಿದೆ.

ಮೀಡಿಯುಳನ್ನು ಅರ್ಥಮಾಡಿಕೊಳ್ಳುತ್ತ ಹೋದಂತೆಲ್ಲಾ ನಾಟಕದ
ಬ ... ಹೆಚ್ಚಿನ ತಿಳಿವು ಮೂಡುತ್ತ ಹೋಗುತ್ತದೆ. ಮೀಡಿಯ-ಜೇಸನ್-
ಕ್ರೆ ... ೋನ್ ಇವರ ಮಧ್ಯೆ ಹುಟ್ಟಿದ ವಿರಸ ನಮ್ಮ ನಿರೀಕ್ಷೆ, ತರ್ಕ,
ಸ ... ನಗಳನ್ನು ಮೀರಿ ಸ್ಫೋಟಕ್ಕೆ ಕಾರಣವಾಗುತ್ತದೆ. ಮನುಷ್ಯನ ಗುಣ
ಸ ... ಗಳಲ್ಲಿಯೇ ಆಗಲಿ, ಅವನು ಬದುಕುವ ಪ್ರದೇಶದ ಗುಣಧರ್ಮ
ಸ ... ಥಿಯಾದದ್ದಾಗಿರಲಿ ತಿಳಿವಿನ ಕೊರತೆ ಅಥವಾ ಪ್ರಬುದ್ಧತೆಯ ಕೊರತೆಯ
ಸ್ವ ... ನ್ನು ಈ ನಾಟಕದ ಪಾತ್ರಗಳ ಮುಖೇನ ಯುರಿಪಿಡಿಸ್ ತೋರಿದ್ದಾನೆ.
ದ ... , ಮಕ್ಕಳ ಮುಗ್ಧತೆ, ಮೇಳನಾಯಕಿಯ ವ್ಯಕ್ತಿತ್ವದ ಬಿರುಸು,
ಪ ... ಸಾಂತ್ವನದ ಹಾರೈಕೆ ಪ್ರಧಾನ ಪಾತ್ರಗಳ ಮೇಲೆ ಸೂಕ್ಷ್ಮವಾ
ಗ ... ಆವ ಒತ್ತಡವನ್ನು ತರುವಲ್ಲಿ ಯಶಸ್ವಿಯಾಗುತ್ತದೆ.

ಮೀಡಿಯ ನಾಟಕವನ್ನು ನಿರ್ದಿಷ್ಟ ತರ್ಕದ ಆಧಾರದ ಮೇಲೆ ನಿಲ್ಲಿಸಲು
ಪ ... ಪ್ರಯತ್ನ ತುಂಬ ಸೀಮಿತವಾದದ್ದು. ಅದು ಅಷ್ಟು ಪ್ರಸ್ತುತವಲ್ಲ.
ವಿ ... ವಿಭಿನ್ನ ಭಾವನೆಗಳು ಸಂಘರ್ಷಕ್ಕೆ ಗುರಿಯಾಗಿ ಒಂದು ಸಂಸ್ಕೃತಿಯ
ಸ್ಫೋ ... ಟಕ್ಕೆ ದಾರಿ ಮಾಡಿಕೊಡುವುದು ಇಲ್ಲಿನ ಮುಖ್ಯ ದೃಷ್ಟಿ. ಮೀಡಿಯಳ
ತ ... ತು ಹಾಗೂ ಸದ್ಯದಲ್ಲಿ ನೆಲೆ ಕಳೆದುಕೊಂಡು ಪರಕೀಯತೆಗೆ ತುತ್ತಾ
ಗಿ ... ಕಾರಿಂಥ ಎರಡು ಭಿನ್ನ ಸಂಸ್ಕೃತಿಯ ಪ್ರತೀಕವಾಗಿ ನಾಟಕದಲ್ಲಿ
ಬೆಳೆದಿದೆ. ಮೀಡಿಯ ಜೇಸನ್ ಅನ್ನು ವಿರೋಧಿಸುತ್ತಲೇ ತಾಯ್ನಾಡಿನ ಕಂಪನ
ಗಳನ್ನು, ಜೀವಂತಿಕೆಯನ್ನು, ಸ್ವಾರ್ಥರಾಹಿತ್ಯವನ್ನು ಬಯಲುಗೊಳಿಸುತ್ತಾಳೆ.
ಕಾರಿಂಥ್ ವಿರೋಧ ಮೀಡಿಯಳಲ್ಲಿ ತನ್ನ ತನ್ನಂತವರ ಬರ್ಬರತೆಯ ಸಂಕೇತ
ವಾಗಿದೆ. ಮೀಡಿಯ ಕಾರಿಂಥ್‌ನಲ್ಲಿ ಹುಟ್ಟಿದ ತನ್ನ ಮಕ್ಕಳನ್ನು ತಾನೇ
ಕೊಲ್ಲುತ್ತಾಳೆ. ಮಕ್ಕಳನ್ನೇ ಕೊಲ್ಲುವ ತಾಯಿಯ ವಸ್ತುವನ್ನುಳ್ಳ ಈ ನಾಟಕ
ಅನೇಕ ಪ್ರಶ್ನೆಗಳನ್ನು-ನಾಟಕೀಯ ಒತ್ತಡದ ಮೂಲಕ ಚರ್ಚಿಸುತ್ತಲಿದೆ.
ಅದೆಂದರೆ ತಂದೆ-ತಾಯಿ-ಮಕ್ಕಳಿಗೆ ಸಂಬಂಧಿಸಿದ್ದು. ಕ್ರೆಯೋನ್-ರಾಜಕುಮಾರಿ,
ಜೇಸನ್-ಅವನ ಇಬ್ಬರು ಮಕ್ಕಳು ಈ ಸಂಬಂಧ ನಾಟಕದ ಗ್ರಹಿಕೆಗೆ ಮಹತ್ವದ
ಒಳನೋಟಗಳನ್ನು ಕೊಡುತ್ತಿದೆ. ಕ್ರೆಯಾನ್ ಮಗಳನ್ನು ಪ್ರೀತಿಸುವ ಬಗೆ,
ಮಗಳ ಮೇಲಿನ ಮೋಹದಿಂದ ಸತ್ತ ರೀತಿ ಮೀಡಿಯಳಿಗೆ ತಂದೆ ಮಕ್ಕಳ
ಸಂಬಂಧದ ಸೂತ್ರದ ತಿಳಿವಿಗೆ ಕಾರಣವಾಗುತ್ತದೆ. ಈ ಗ್ರಹಿಕೆ-ಜೇಸನ್
ಮಕ್ಕಳನ್ನು ಕಳೆದುಕೊಂಡು ತೀವ್ರ ದುರಂತವನ್ನು ಅನುಭವಿಸುವಂತೆ ಮಾಡುವಲ್ಲಿ

ಮೀಡಿಯ ಸಫಲಳಾಗುತ್ತಾಳೆ. ಜೇಸನ್‌ನ ಕ್ರೌರ್ಯದ ನೆರಳು ಮೀಡಿಯಳನ್ನು ತಟ್ಟುವ ಮೊದಲೇ ಅವಳು ಸೂರ್ಯದೇವನ ರಥವೇರಿ ಹೊಸದಿಕ್ಕಿನತ್ತ ಚಲಿಸುತ್ತಾಳೆ. ಕೊನೆಯ ದೃಶ್ಯದ ಮಾಂತ್ರಿಕ ಸನ್ನಿವೇಶ ಅನೇಕ ಅರ್ಥಸಾಧನೆಗಳನ್ನು ಹೊಮ್ಮಿ ಸುವ ಶಕ್ತಿಯುತ ಮುಕ್ತಾಯವಾಗಿದೆ. ಚಾರಿತ್ರಿಕ ವಾಸ್ತವಿಕತೆಯನ್ನು, ಆದ್ಯಂತಿಕ ಸ್ವಾತಂತ್ರ್ಯದ ಕಲ್ಪನೆಯನ್ನು ಇದು ಪ್ರತಿಮಿಸುತ್ತಿದೆ.

ಮೀಡಿಯ ಕಾರಿಂಥ್‌ಗೆ ಬಂದು ತನ್ನ ನೆಲೆಯನ್ನು ಕಳಕೊಂಡವಳು. ಕ್ರೆಯೋನ್‌ನಿಂದ ಗಡೀಪಾರಿಗೆ ಗುರಿಯಾದವಳು. ನಿಂತ ನೆಲೆ ಕುಸಿದು ಮೀಡಿಯಳ ಪರಕೀಯತೆಯ ತೀವ್ರತೆ ಹೆಚ್ಚಾದಂತೆ ನಾಟಕದ ದುರಂತ ವ್ಯಾಪಕ ವಾಗುತ್ತದೆ. ಜೇಸನ್‌ನ ಪ್ರೇಮದ ವಿವಂಚನೆ ಮೀಡಿಯಳಿಗೆ ಇಡೀ ಹೆಣ್ಣು ಸಮೂಹದ ಮೇಲೆ ನಡೆದ ಹಲ್ಲೆ ಎಂದು ಮೀಡಿಯ ತಿಳಿಯುತ್ತಾಳೆ. ಇದರಿಂದ ಯಾವ ಸಮಾಧಾನವನ್ನೂ, ಮೀಡಿಯ ಬಯಸುವುದಿಲ್ಲ. ಸ್ವಾರ್ಥ ಬರ್ಬರತೆ ಯಿಂದ ಉಂಟಾದ ದುರಂತ ಸ್ಥಿತಿಯಿಂದ ಮಾಮೂಲು ಸ್ಥಿತಿಗೆ ಬರಲು ಇಚ್ಛಿಸದ ಮೀಡಿಯ ಸಂಬಂಧರಹಿತ ಅಸ್ತಿತ್ವವನ್ನು ಬಯಸುತ್ತಾಳೆ. ಮುಕ್ತ ಸ್ವಾತಂತ್ರ್ಯದತ್ತ ಅವಳ ಪ್ರಯಾಣ ಸಾಗುತ್ತದೆ. ಅನಂತರದಲ್ಲಿ–ಜೇಸನ್ ಗಂಡು–ಹೆಣ್ಣುಗಳ ಸಂಬಂಧವನ್ನು ಮಕ್ಕಳು ಹಾಗೂ ಪೀಳಿಗೆಯ ಸ್ವರೂಪ ವನ್ನು ಮಂಡಿಸುತ್ತಾನೆ. ಮುಕ್ತ ಸ್ಥಿತಿಯತ್ತ ಚಲಿಸಿದ ಮೀಡಿಯ, ದುಃಖತಪ್ತ ಜೇಸನ್ ಎರಡು ಮುಖ್ಯ ತತ್ವಗಳಿಗೆ ಪ್ರತಿನಿಧಿಗಳು ತನ್ನ ಅಸ್ತಿತ್ವ, ಸ್ಥಾನಮಾನಗಳ ಬಗೆಗೆ ಸ್ವಾರ್ಥದಿಂದ ವರ್ತಿಸುವ ಗಂಡು ಪ್ರಪಂಚದ ಎದುರಿಗೆ ಮೀಡಿಯ ಹೆಣ್ಣಿನ ಅಂತರಂಗದ ವಿಭಿನ್ನ ತಳಮಳಗಳನ್ನು ಪ್ರತಿನಿಧಿಸುತ್ತಾಳೆ. ಮೀಡಿಯಳ ಮಾತುಗಳು ಅವಳ ಅಂತರಂಗ ನೋಟವನ್ನಷ್ಟೇ ನೀಡದೆ ಇಡೀ ಹೆಣ್ಣು ಸಮು ದಾಯಕ್ಕೆ ಸಂಬಂಧಿಸಿದ್ದಾಗುತ್ತದೆ. ಇಡೀ ಹೆಣ್ಣು ಸಮುದಾಯದ ಸ್ವಾತಂತ್ರ್ಯದ ಕಲ್ಪನೆಯನ್ನೇ ಅವಳು ಹೊಸದಾಗಿ ಹೇಳುತ್ತಿದ್ದಾಳೆ.

# ಸ್ವಾತಂತ್ರ್ಯ ಮತ್ತು ಭಗತ್‌ಸಿಂಗ್

ನಮ್ಮ ಮೇಲೆ ಕೆಲವು ಗುರುತರವಾದ ಆಪಾದನೆಗಳನ್ನು ಮಾಡಲಾಗಿದೆ. ಆದ್ದರಿಂದ ಈ ಹಂತದಲ್ಲಿ ನಮ್ಮ ವರ್ತನೆಯನ್ನು ವಿವರಿಸುವುದು ಸೂಕ್ತವೆಂದು ಭಾವಿಸುತ್ತೇವೆ.

ಈ ಸಂಬಂಧದಲ್ಲಿ ಕೆಳಗಿನ ಪ್ರಶ್ನೆಗಳು ಉದ್ಭವಿಸುತ್ತವೆ :

1. ಬಾಂಬುಗಳನ್ನು ಶಾಸನಸಭೆಯ ಅಂಗಣದೊಳಕ್ಕೆ ಎಸೆಯಲಾಯಿತೆ ? ಹಾಗಿದ್ದರೆ, ಏಕೆ ?

2. ಕೆಳಗಿನ ನ್ಯಾಯಾಲಯವು ಮಾಡಿರುವ ಆಪಾದನೆಯು ಸರಿಯೆ, ತಪ್ಪೆ ?

ಮೊದಲ ಪ್ರಶ್ನೆಯ ಪೂರ್ವಭಾಗಕ್ಕೆ ನಮ್ಮ ಉತ್ತರ ಇದು : ಹೌದು. ಆದರೆ ಕೆಲವು 'ಪ್ರತ್ಯಕ್ಷದರ್ಶಿಗಳು' ಸುಳ್ಳುಸಾಕ್ಷ್ಯ ನೀಡಿದ್ದಾಗ್ಯೂ ನಮ್ಮ ಬಾಧ್ಯತೆಯಿಂದ ನುಣುಚಿಕೊಳ್ಳುವುದು ನಮ್ಮ ಉದ್ದೇಶವಲ್ಲ. ಅವರ ಬಗೆಗಿನ ನಮ್ಮ ಹೇಳಿಕೆಗೆ ಯಾವ ಮಾನ್ಯತೆ ನೀಡಬೇಕೆಂದು ನೀವೇ ತೀರ್ಮಾನಿಸಿಕೊಳ್ಳಿ. ನಿದರ್ಶನ ರೂಪವಾಗಿದ್ದ ಸಾರ್ಜೆಂಟ್ ಟೆರ‍್ರಿಯ ಸಾಕ್ಷಿಯನ್ನೇ ನೋಡಿ. ನಮ್ಮಿಬ್ಬರಲ್ಲಿ ಒಬ್ಬನಿಂದ ಪಿಸ್ತೂಲನ್ನು ಬಲಾತ್ಕಾರವಾಗಿ ಪಡೆದನೆಂದು ಅವನ

---

ಆಪಾದನೆಗೊಳಗಾದ ಭಗತ್‌ಸಿಂಗ್ ನ್ಯಾಯಾಲಯದಲ್ಲಿ ನೀಡಿದ ಹೇಳಿಕೆಯ ಪೂರ್ಣ ಪಾಠ ಇದು.

ಡಾ. ಜಿ. ಆರ್. ಅವರ ಇತ್ತೀಚೆಗೆ ಬಿಡುಗಡೆಯಾದ ಪುಸ್ತಕದಿಂದ ಆಯ್ದುಕೊಳ್ಳಲಾಗಿದೆ.

ಹೇಳಿಕೆ. ಇದು ಶುದ್ಧಾಂಗ ಸುಳ್ಳು. ನಾವು ದಸ್ತಗಿರಿ ಮಾಡಿಸಿಕೊಳ್ಳುವ ವೇಳೆಯಲ್ಲಿ ನಮ್ಮಲ್ಲಿ ಪಿಸ್ತೂಲೇ ಇರಲಿಲ್ಲ. ನಾವು ಬಾಂಬುಗಳನ್ನೆಸೆದಿದ್ದನ್ನು ಕಂಡೆವೆಂದು ಸಾಕ್ಷ್ಯ ನೀಡಿರುವವರು ಸುಳ್ಳು ಹೇಳುತ್ತಿಲ್ಲವೆಂದು ನಂಬಬಹುದು. ನ್ಯಾಯಾಂಗದ ಶುದ್ಧತೆ ಮತ್ತು ನಿಷ್ಪಕ್ಷಪಾತವನ್ನು ಗುರಿಯಾಗಿಟ್ಟುಕೊಂಡಿರುವವರಿಗೆ ಇದರಿಂದ ನೀತಿಪಾಠವೊಂದು ಸಿಗಬಹುದು.

ಅದೇ ಸಮಯದಲ್ಲಿ ಇನ್ನೊಂದಂಶವನ್ನೂ ನಾವು ಒಪ್ಪಿಕೊಳ್ಳುತ್ತೇವೆ. ಅದೇನೆಂದರೆ ಈವರೆಗೆ ಪಬ್ಲಿಕ್ ಪ್ರಾಸಿಕ್ಯೂಟರ್ ಮತ್ತು ನ್ಯಾಯಾಲಯ ಪಕ್ಷಪಾತವಿಲ್ಲದೆ ನಡೆದುಕೊಂಡಿದ್ದಾರೆಂಬುದು.

ಮೊದಲ ಪ್ರಶ್ನೆಯ ಉತ್ತರಾರ್ಧ ಭಾಗಕ್ಕೆ ಉತ್ತರ ಕೊಡುವಾಗ ಸ್ವಲ್ಪ ದೀರ್ಘವಾದ ಚರ್ಚೆಯಲ್ಲಿ ನಾವು ತೊಡಗಬೇಕಾಗುತ್ತದೆ ಇಲ್ಲವಾದಲ್ಲಿ ಈಗಾಗಲೇ ಐತಿಹಾಸಿಕ ಘಟನೆಯಾಗಿರುವ ನಮ್ಮ ಕೃತ್ಯದ ಸನ್ನಿವೇಶ ಹಾಗೂ ಉದ್ದೇಶಗಳ ಬಗ್ಗೆ ಪೂರ್ಣವಾದ ಮತ್ತು ಖಂಡಿತವಾದ ವಿವರಣೆ ನೀಡಲಾಗುವುದಿಲ್ಲ.

ಜೈಲಿನಲ್ಲಿದ್ದಾಗ ನಮ್ಮನ್ನು ಸಂಧಿಸಿದ ಕೆಲವು ಪೋಲೀಸ್ ಅಧಿಕಾರಿಗಳು ನಮಗೆ ತಿಳಿಸಿರುವಂತೆ ಪಾರ್ಲಿಮೆಂಟಿನ ಜಂಟಿ ಅಧಿವೇಶನವನ್ನು ಉದ್ದೇಶಿಸಿ ಮಾತನಾಡುವಾಗ ಲಾರ್ಡ್ ಇರ್ವಿನ್ ಹೇಳಿದ್ದಾನಂತೆ : ನಮ್ಮ ಆಕ್ರಮಣವು ಯಾವ ವ್ಯಕ್ತಿಗಳ ಮೇಲೂ ಅಲ್ಲ, ಒಂದು ವ್ಯವಸ್ಥೆಯ ಮೇಲೆ, ಎಂದು. ಇದನ್ನು ಕೇಳಿದಾಗ ನಮ್ಮ ಉದ್ದೇಶವನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಾಗಿದೆಯೆಂದು ನಮಗೆ ಸಮಾಧಾನವಾಯಿತು.

ಮಾನವಜನಾಂಗವನ್ನು ಪ್ರೀತಿಸುವುದರಲ್ಲಿ ನಾವು ಯಾರಿಗೂ ಕಡಿಮೆಯಿಲ್ಲ. ಯಾವ ವ್ಯಕ್ತಿಯ ವಿರುದ್ಧವೇ ಆಗಲಿ ಸೇಡಿನ ಭಾವನೆಯನ್ನು ಹೊಂದುವ ಬದಲು ನಾವು ಮಾನವ ಜೀವವನ್ನು ವರ್ಣಿಸಲಸದಳವಾದಷ್ಟು ಪವಿತ್ರವಾದುದೆಂದು ಬಗೆಯುತ್ತೇವೆ.

ಹೇಡಿತನದ ಅತ್ಯಾಚಾರವನ್ನೆಸಗುವವರು ನಾವಲ್ಲ ; ಆದ್ದರಿಂದ ರಾಷ್ಟ್ರವು ನಮ್ಮನ್ನು ಕಂಡು ತಲೆತಗ್ಗಿಸಬೇಕಾಗಿಲ್ಲ. ಕಪಟ ಸಮಾಜವಾದಿ ದಿವಾನ್ ಚಮನ್‌ಲಾಲ್ ಮಾತ್ರ ನಮ್ಮನ್ನು ಆ ರೀತಿ ವರ್ಣಿಸಿದ್ದಾನೆಂದು ವರದಿಯಾಗಿದೆ. ಲಾಹೋರಿನ ಪತ್ರಿಕೆ 'ಟ್ರಿಬ್ಯೂನ್' ಮತ್ತು ಇನ್ನು ಬೇರೆ ಕೆಲವರು ಹೇಳುವಂತೆ ನಾವು ಹುಚ್ಚರೂ ಅಲ್ಲ.

ನಮ್ಮ ರಾಷ್ಟ್ರದ ಇತಿಹಾಸ ಇಂದಿನ ಪರಿಸ್ಥಿತಿ ಮತ್ತು ಹಂಬಲಗಳನ್ನು ಗಂಭೀರವಾಗಿ ಅಧ್ಯಯನ ಮಾಡುವ ವಿನಯಶೀಲ ವಿದ್ಯಾರ್ಥಿಗಳು ನಾವೆಂಬುದನ್ನು ಬಿಟ್ಟು ನಮಗೆ ಬೇರಾವ ಹಮ್ಮೂ ಇಲ್ಲ. ಠಕ್ಕುತನವನ್ನು ಸಾವು ಹೀನಾಯವೆಂದೆಣಿಸುತ್ತೇವೆ. ನಮ್ಮ ಕಾರ್ಯರೂಪದ ಪ್ರತಿಭಟನೆಯು ಒಂದು ವ್ಯವಸ್ಥೆಯ ವಿರುದ್ಧ. ಆ ವ್ಯವಸ್ಥೆಯು ಹುಟ್ಟಿದಾಗಿನಿಂದಲೂ ತನ್ನ ಅಪ್ರಯೋಜಕತೆಯನ್ನು ಸಾರುತ್ತಲೇ ಬಂದಿದೆ. ಅಂತೆಯೇ ಅದೆಷ್ಟು ತುಂಟತನ ಮಾಡಬಲ್ಲುದೆಂಬುದನ್ನೂ ಪ್ರದರ್ಶಿಸುತ್ತಾ ಬಂದಿದೆ. ನಾವು ಹೆಚ್ಚು ಹೆಚ್ಚು ಯೋಚನೆ ಮಾಡಿದಷ್ಟೂ ನಮಗೆ ಖಾತರಿಯಾಗಿದೆ : ಈ ಸಂಸ್ಥೆ ಇರುವುದು ಭಾರತದ ಅಸಹಾಯಕತೆ ಮತ್ತು ಅಪಮಾನಗಳನ್ನು ವಿಶ್ವಕ್ಕೆಲ್ಲಾ ಡಂಗೂರ ಹೊಡೆದು ಪ್ರದರ್ಶಿಸುವುದಕ್ಕಾಗಿ. ಬೇಜವಾಬ್ದಾರಿತನ ಮತ್ತು ಸ್ವೇಚ್ಛಾಚಾರಿ ಆಡಳಿತಗಳ ಅತ್ಯುತ್ಕಟ ಎಲ್ಲೆಯನ್ನು ಈ ವ್ಯವಸ್ಥೆ ಪ್ರತಿಬಿಂಬಿಸುತ್ತದೆ. ಜನಗಳ ಪ್ರತಿನಿಧಿಗಳು ಪದೇ ಪದೇ ರಾಷ್ಟ್ರೀಯ ಬೇಡಿಕೆಗಳನ್ನು ಈಡೇರಿಸಲು ಒತ್ತಾಯ ಮಾಡಿದ್ದಾರೆ ; ಆದರೆ ಅವರ ಒತ್ತಾಯವೆಲ್ಲಾ ಕಸದ ಬುಟ್ಟಿಯ ಪಾಲಾಗಿದೆ ಮಾತ್ರ.

ಸಭೆಯಲ್ಲಿ ಅಂಗೀಕೃತವಾಗಿರುವ ಎಷ್ಟೋ ಗಂಭೀರ ನಿರ್ಣಯಗಳನ್ನು ಯಾವ ಗೌರವವನ್ನೂ ಕೊಡದೆ ಕಾಲಿನಡಿ ಹೊಸಕಿಹಾಕಿರುವ ಪ್ರಸಂಗಗಳೆಷ್ಟೋ ! ದಮನಕಾರಿ ಹಾಗೂ ನಿರಂಕುಶ ಕ್ರಮಗಳನ್ನು ತೆಗೆದುಹಾಕಬೇಕೆಂಬ ನಿರ್ಣಯಗಳನ್ನು ಅತೀವ ತಾತ್ಸಾರದಿಂದ ಕಡೆಗಣಿಸಲಾಗಿದೆ. ಶಾಸನಸಭೆಗಳ ಸದಸ್ಯರು ಒಪ್ಪಿಗೆಗೆ ಅನರ್ಹವೆಂದು ತಳ್ಳಿಹಾಕಿರುವ ಸರ್ಕಾರದ ಎಷ್ಟೋ ಕ್ರಮಗಳನ್ನೂ ಸೂಚನೆಗಳನ್ನೂ ಲೇಖಣಿಯ ಒಂದು ಗೀಟಿನಿಂದ ಜಾರಿಗೆ ತರಲಾಗಿದೆ. ಸಂಕ್ಷಿಪ್ತವಾಗಿ ಹೇಳುವುದಾದರೆ, ಈ ವ್ಯವಸ್ಥೆಯ ಅಸ್ತಿತ್ವಕ್ಕೆ ನ್ಯಾಯಸಮ್ಮತವಾದ ಯಾವೊಂದು ಕಾರಣವನ್ನೂ ನಾವು ಕಾಣಲು ಸಾಧ್ಯವಿಲ್ಲ ; ವ್ಯವಸ್ಥೆಯು ಆಡಂಬರ ಮತ್ತು ಪ್ರತಾಪಗಳಿಂದ ಮೆರೆಯುತ್ತಿದೆ, ನಿಜ ; ಭಾರತದ ಮಿಲಿಯಗಟ್ಟಲೆ ಜನರು ಬೆವರು ಸುರಿಸಿ ಗಳಿಸಿದ ಹಣದ ಆಧಾರದ ಮೇಲೆ ಈ ವ್ಯವಸ್ಥೆ ನಿಂತಿದೆ, ನಿಜ ; ಆದರೆ, ನಮಗೆ ಕಾಣುವುದು ಈ ವ್ಯವಸ್ಥೆಯ ಆಟಾಟೋಪ ಮತ್ತು ಟೊಳ್ಳುತನಗಳು ಮಾತ್ರ. ಅಷ್ಟೇ ಅರ್ಥವಾಗದ ಇನ್ನೊಂದು ಸಂಗತಿಯೆಂದರೆ ನಮ್ಮ ಸಾರ್ವಜನಿಕ ಕ್ಷೇತ್ರದ ನಾಯಕರ ಮನೋಭಾವ. ರಂಗಮಂದಿರದಲ್ಲಿ ಯೋಜಿತವಾದ ಪ್ರಯೋಗದಂತೆ ಕೇವಲ ಕಾಲ್ಪನಿಕವಾದ ಈ ಪ್ರದರ್ಶನವನ್ನು ನಡೆಸಲು ಸಾರ್ವಜನಿಕ ಸಮಯ ಮತ್ತು ಹಣವನ್ನು ಪೋಲು ಮಾಡುವುದಕ್ಕೆ ಇವರೇಕೆ ಸಹಾಯ ಮಾಡಬೇಕು ? ಭಾರತದ ಅಸಹಾಯಕ ದಾಸ್ಯವನ್ನು ವಿಜೃಂಭಿಸುವುದರಲ್ಲಿ ಇವರೇಕೆ ಪಾಲ್ಗೊಳ್ಳಬೇಕು ?

ಈ ಎಲ್ಲ ವಿಷಯಗಳನ್ನೂ ನಾವು ಗಾಢವಾಗಿ ಚಿಂತಿಸುತ್ತಾ ಬಂದಿದ್ದೇವೆ. ಕಾರ್ಮಿಕ ಚಳುವಳಿಯ ನಾಯಕರನ್ನು ಒಟ್ಟೊಟ್ಟಿಗೆ ದಸ್ತಗಿರಿ ಮಾಡಿರುವುದನ್ನು ನಾವು ವೀಕ್ಷಿಸಿದ್ದೇವೆ. ಕಾರ್ಮಿಕ ವಿವಾದಗಳ ಕಾಯಿದೆಯನ್ನು ಶಾಸನ ಸಭೆಯಲ್ಲಿ ಮಂಡಿಸಿದಾಗ ಅದು ಯಾವ ರೀತಿಯ ಪುರಸ್ಕಾರವನ್ನು ಪಡೆಯುತ್ತಿತ್ತೆಂಬುದನ್ನು ಅವಲೋಕಿಸಲು ನಾವು ಉತ್ಸುಕರಾಗಿದ್ದೆವು. ಅಲ್ಲಿನ ಚರ್ಚೆಯು ನಮ್ಮ ಯಾವ ಅನುಮಾನವನ್ನೂ ಸುಳ್ಳಾಗಿಸಲಿಲ್ಲ : ಶ್ರಮಜೀವನ ನಡೆಸುತ್ತಿರುವ ಮಿಲಿಯಗಟ್ಟಲೆ ಭಾರತೀಯರು ಈ ವ್ಯವಸ್ಥೆಯಿಂದ ಅಪೇಕ್ಷಿಸಬಹುದಾದದ್ದೇನೂ ಇಲ್ಲ. ಅದು ಅಸಹಾಯಕ ದುಡಿಮೆಗಾರರ ದಾಸ್ಯದ ಹಾಗೂ ಕತ್ತು ಹಿಚುಕುವ ಶೋಷಕರ ದರ್ಪದ ಮೂರ್ತಿವೆತ್ತ ಕಠೋರ ಸ್ಮಾರಕದಂತಿದೆ.

ಕೊನೆಯದಾಗಿ ನಮ್ಮ ಪರಿಗಣನೆಯ ಪ್ರಕಾರ ಅತ್ಯವಮಾನಕರವಾದ ಪ್ರಸಂಗವೊಂದು ನಡೆದಿದೆ. ಅಮಾನವೀಯ ಹಾಗೂ ಬರ್ಬರವಾದ ಕ್ರಮವೊಂದನ್ನು ಇಡೀ ರಾಷ್ಟ್ರದ ಪ್ರತಿನಿಧಿಗಳ ಭಕ್ತಿಪುರಸ್ಸರವಾದ ತಲೆಗಳ ಮೇಲೆ ಹೇರಲಾಯಿತು. ಇದರಿಂದಾಗಿ ಮಿಲಿಯಗಟ್ಟಲೆ ದೀನದಲಿತರ ಮತ್ತು ಕಷ್ಟ ಕಾರ್ಪಣ್ಯಗಳ ನಡುವೆ ದುರ್ಭರವಾದ ಜೀವನವನ್ನು ಸಾಗಿಸುತ್ತಿರುವವರ ಪ್ರಾಥಮಿಕ ಹಕ್ಕನ್ನು ಕಸಿದುಕೊಳ್ಳಲಾಗಿದೆ ; ಆರ್ಥಿಕ ಬವಣೆಯನ್ನು ನೀಗಿಕೊಳ್ಳಲು ಅವರಿಗಿರುವ ಏಕೈಕ ಸಾಧನೆಗೆ ಚ್ಯುತಿಯುಂಟಾಗಿದೆ. ಗುಲಾಮಗಿರಿಗೆ ಸಿಲುಕಿ ನರಳುತ್ತಿರುವ ಮೂಕ ಶ್ರಮಜೀವಿಗಳ ಬಗ್ಗೆ ನಮ್ಮಂತೆ ಅನುಕಂಪ ಹೊಂದಿರುವವರಾರೂ ಇಂತಹ ಕ್ಷುದ್ರ ಘಟನೆಯನ್ನು ಸ್ವಸ್ಥ ಚಿತ್ತದಿಂದ ನೋಡುತ್ತಾ ಕುಳಿತಿರಲಾರರು. ಅವರಿಗಾಗಿ ಯಾರ ಹೃದಯದಲ್ಲಿ ವೇದನೆಯುಂಟಾಗುತ್ತದೋ, ಯಾರು ಆರ್ಥಿಕ ನಿರ್ಮಾಣಕ್ಕಾಗಿ ಮೌನವಾಗಿ ತಮ್ಮ ಜೀವರಕ್ತವನ್ನು ಸುರಿದಿದ್ದಾರೋ ಅವರು ಈ ಕ್ರಮದಿಂದ ವಿಚಲಿತರಾಗದೆ ಉಳಿಯುವುದಿಲ್ಲ, ಈ ಕ್ರೂರ ಆಘಾತವನ್ನು ಸಹಿಸುವುದಿಲ್ಲ.

ತತ್ಪರಿಣಾಮವಾಗಿ, ದಿವಂಗತ ಎಸ್.ಆರ್. ದಾಸ್ ಅವರ ಮಾತೊಂದು ನಮ್ಮಲ್ಲಿ ಮರುಕಳಿಸಿತು. ಅವರು ಗವರ್ನರ್–ಜನರಲ್‌ನ ಕಾರ್ಯಾಂಗ ಸಮಿತಿಯಲ್ಲಿ ಕಾನೂನು ಸಚಿವರಾಗಿದ್ದರು. ಮಗನಿಗೆ ಅವರು ಬರೆದಿದ್ದ ಒಂದು ಪ್ರಸಿದ್ಧವಾದ ಪತ್ರದಲ್ಲಿದ್ದ ಮಾತುಗಳ ಸಾರಾಂಶ ಇದು : 'ಇಂಗ್ಲೆಂಡನ್ನು ತನ್ನ ಕನಸಿನ ಲೋಕದಿಂದ ಹೊರತರಲು ಬಾಂಬಿನ ಅವಶ್ಯಕತೆ ಇದೆ !' ಅದರಂತೆ ನಾವು ಶಾಸನಸಭೆಯ ಅಂಗಣದೊಳಕ್ಕೆ ಬಾಂಬನ್ನು ಒಗೆದವು. ಹೃದಯ ವಿದ್ರಾವಕವಾದ ತಮ್ಮ ಬೇನೆಯನ್ನು ವ್ಯಕ್ತಗೊಳಿಸಲು ಬೇರಾವ ಸಾಧನವೂ ಇಲ್ಲದ ಕೋಟಿಗಟ್ಟಲೆ ಜನರ ಪರವಾಗಿ ಹೀಗೆ ನಾವು ನಮ್ಮ ಪ್ರತಿಭಟನೆಯನ್ನು

ಸಲ್ಲಿಸಿದ್ದೇವೆ. ನಮ್ಮ ಒಂದೇ ಉದ್ದೇಶವೆಂದರೆ 'ಕಿವುಡರಿಗೂ ಕೇಳುವಂತೆ ಗಟ್ಟಿಯಾಗಿ ಕೂಗಿ ಹೇಳುವುದು' ಮತ್ತು ಲಕ್ಷ್ಯವಿಡದೆ ನಡೆಯುವವರಿಗೆ ಸಮಯೋಚಿತವಾದ ಎಚ್ಚರಿಕೆ ನೀಡುವುದು. ನಮ್ಮಷ್ಟೇ ತೀವ್ರವಾಗಿ ಇವನ್ನೆಲ್ಲಾ ಅನುಭವಿಸಿರುವವರು ಹಲವರಿದ್ದಾರೆ. ಭಾರತದ ಜನಕೋಟಿಯ ಸಮುದ್ರದಾಳದಲ್ಲಿ ತೋರಿಕೆಗೆ ಶಾಂತವಾದ ಗಾಂಭೀರ್ಯವಿದೆ; ಆದರೆ ಅಲ್ಲಿಂದ ಸದ್ಯದಲ್ಲೇ ಒಂದು ಪ್ರಬಲವಾದ ಬಿರುಗಾಳಿ ಬೀಸಲಿದೆ. ನಾವು ಮಾಡಿರುವ ಚಿಕ್ಕ ಕೆಲಸವೆಂದರೆ ಇದಕ್ಕೆ ಪೂರ್ವಭಾವಿಯಾಗಿ "ಅಪಾಯದ ಚಿಹ್ನೆ"ಯನ್ನು ಎತ್ತರಕ್ಕೆ ಹಾರಿಸಿ ಎಚ್ಚರ ನೀಡುವುದು. ಮುಂಬರುವ ಭಾರೀ ಅಪಾಯವನ್ನು ಲೆಕ್ಕಿಸದೆ ಮುನ್ನುಗ್ಗುತ್ತಿರುವವರು ಈ ಚಿಹ್ನೆಯಿಂದ ಸೂಚನೆಯನ್ನು ಪಡೆದುಕೊಳ್ಳಲಿ. ಕಾಲ್ಪನಿಕವಾದ ಅಹಿಂಸೆಯ ಶಕಕ್ಕೆ ಇತಿಶ್ರೀ ಹಾಡಲು ನಾವೊಂದು ಪ್ರತೀಕದಂತಾಗಿದ್ದೇವೆ. ಆ ಕಾಲ್ಪನಿಕ ಅಹಿಂಸೆ ಎಷ್ಟು ನಿಷ್ಪ್ರಯೋಜಕವೆಂಬುದನ್ನು ಎಳ್ಳಷ್ಟೂ ಸಂಶಯವಿಲ್ಲದಂತೆ ಉದಯೋನ್ಮುಖ ಪೀಳಿಗೆಯು ಗೊತ್ತು ಮಾಡಿಕೊಂಡಿದೆ.

ಮೇಲಿನ ವಾಕ್ಯವೃಂದದಲ್ಲಿ **ಕಾಲ್ಪನಿಕ ಅಹಿಂಸೆ** ಎಂಬ ಪದಗುಚ್ಛವನ್ನು ನಾವು ಬಳಸಿದ್ದೇವೆ. ಅದರ ಬಗ್ಗೆ ಒಂದು ವಿವರಣೆ ಅಗತ್ಯ. ಪರಾಕ್ರಮಣಕ್ಕಾಗಿ ಬಲಾತ್ಕಾರವನ್ನು ಬಳಸುವುದು 'ಹಿಂಸೆ' ಎನಿಸಿಕೊಳ್ಳುತ್ತದೆ. ಆದ್ದರಿಂದ ನೈತಿಕವಾಗಿ ಅದು ಸಮರ್ಥನೀಯವಲ್ಲ. ಆದರೆ ನ್ಯಾಯಸಮ್ಮತವಾದ ಗುರಿಸಾಧನೆಗಾಗಿ ಅದನ್ನು ಬಳಸಿದಾಗ (ಬಳಸಿಕೊಂಡಾಗ) ಅದು ತನ್ನ ನೈತಿಕ ಸಮರ್ಥನೆಯನ್ನು ತಾನೇ ತೋರ್ಪಡಿಸುತ್ತದೆ. ಏನೇ ಸಂದರ್ಭವಿರಲಿ ಬಲಾತ್ಕಾರವನ್ನು ಸರ್ವಥಾ ತೊಡೆದುಹಾಕಬಹುದೆಂಬ ಚಪಲ ಕಾಲ್ಪನಿಕ ಲೋಕಕ್ಕೆ ಸೇರಿದ್ದು. ರಾಷ್ಟ್ರದಲ್ಲಿ ತೋರಿಬಂದಿರುವ ಹೊಸ ಚಳುವಳಿಯು ಗುರುಗೋವಿಂದ್ ಸಿಂಗ್ ಹಾಗೂ ಶಿವಾಜಿ, ಕೆಮಲ್‌ಪಾಶಾ ಹಾಗೂ ರೀಜಾಖಾನ್, ವಾಷಿಂಗ್ಟನ್ ಹಾಗೂ ಗರಿಬಾಲ್ಡಿ, ಲಫಾಯೆತ್ ಹಾಗೂ ಲೆನಿನ್‌ರಂತಹವರನ್ನು ಸ್ಫೂರ್ತಿಗೊಳಿಸಿದ ಆದರ್ಶಗಳಿಂದ ಪ್ರೇರಿತವಾಗಿದೆ. ಮೂಡಲಿರುವ ಆ ಕೆಂಪನೆಯ ಪ್ರಾತಃಕಾಲದ ಸೂಚನೆಯನ್ನು ನಾವು ಕೊಟ್ಟಿದ್ದೇವೆ.

ವಿದೇಶೀ ಸರ್ಕಾರ ಮತ್ತು ಭಾರತದ ಸಾರ್ವಜನಿಕ ಕ್ಷೇತ್ರದ ನಾಯಕರು ಅಂಥದೊಂದು ಚಳುವಳಿಯೇ ಇಲ್ಲವೆಂಬಂತೆ ಕಣ್ಣುಮುಚ್ಚಿ ಕುಳಿತಿರುವುದರಿಂದ ಅವರಿಗೆ ಕೇಳಿಸದೆ ಹೋಗದಿರುವಂತಹ ರೀತಿಯಲ್ಲಿ ಎಚ್ಚರ ನೀಡಬೇಕಾದ್ದು ನಮ್ಮ ಕರ್ತವ್ಯವೆಂದು ನಾವು ಭಾವಿಸಿದೆವು.

ಘಟನೆಯ ಹಿಂದಿನ ಉದ್ದೇಶವನ್ನು ಕುರಿತು ಈವರೆಗೆ ಪ್ರಸ್ತಾಪಮಾಡಿದ್ದಾಗಿದೆ; ಎಷ್ಟರವರೆಗೆ ಹೋಗಬೇಕೆಂದು ನಮ್ಮ ಸಂಕಲ್ಪವಾಗಿದ್ದಿತೆಂಬುದನ್ನು ಈಗ ಪ್ರತಿಪಾದಿಸಬೇಕು.

ಶಾಸನ ಸಭೆಯಲ್ಲಿ ಚಿಕ್ಕಪುಟ್ಟ ಗಾಯಗೊಂಡವರ ಬಗ್ಗೆಯಾಗಲೀ ಇತರ ಯಾವುದೇ ಸದಸ್ಯರ ಬಗ್ಗೆಯಾಗಲೀ ನಮಗೆ ವೈಯಕ್ತಿಕವಾದ ಅಸೂಯೆಯಾಗಲೀ, ದ್ವೇಷವಾಗಲೀ ಇರಲಿಲ್ಲ. ಪ್ರತಿಯಾಗಿ ಮಾನವ ಜೀವವು ವರ್ಣಿಸಲಸದಳವಾದಷ್ಟು ಮಟ್ಟಿಗೆ ಪವಿತ್ರವಾದುದೆಂಬ ನಮ್ಮ ನಂಬಿಕೆಯನ್ನು ಪುನರುಚ್ಚರಿಸುತ್ತಿದ್ದೇವೆ. ಬೇರೆಯವರಿಗೆ ಹಾನಿಯನ್ನುಂಟುಮಾಡುವ ಬದಲು ಮಾನವ ಜನಾಂಗದ ಸೇವೆಗಾಗಿ ನಮ್ಮ ಜೀವಗಳನ್ನು ಮುಡುಪಾಗಿಡಲು ಸಿದ್ಧರಿದ್ದೇವೆ. ಸಾಮ್ರಾಜ್ಯಶಾಹಿಯ ಸೈನ್ಯಗಳ ಕೂಲಿಯ ಸಿಪಾಯಿಗಳು ಯಾವ ಅನುತಾಪವೂ ಇಲ್ಲದೆ ಶಿಸ್ತಿನಿಂದ ಜನರನ್ನು ಕೊಲ್ಲಬಹುದು; ನಾವು ಅವರಂತಲ್ಲ. ಮಾನವ ಜೀವವನ್ನು ನಾವು ಆದರಿಸುತ್ತೇವೆ ಮತ್ತು ನಮ್ಮ ಶಕ್ತಿಯಿದ್ದಷ್ಟು ಮಟ್ಟಿಗೆ ಅದನ್ನು ಉಳಿಸಲು ಯತ್ನಿಸುತ್ತೇವೆ. ಆದಾಗ್ಯೂ ನಾವು ಉದ್ದೇಶಪೂರ್ವಕವಾಗಿಯೇ ಬಾಂಬುಗಳನ್ನು ಶಾಸನಸಭೆಯ ಅಂಗಣದೊಳಕ್ಕೆ ಒಗೆದೆವೆಂಬುದನ್ನು ಒಪ್ಪಿಕೊಳ್ಳುತ್ತೇವೆ. ಸತ್ಯಾಂಶಗಳು ತಮಗೆ ತಾವೇ ವಕ್ತಾರರಾಗಿವೆ. ನಮ್ಮ ಉದ್ದೇಶವನ್ನು ಕೃತ್ಯದ ಪರಿಣಾಮದಿಂದಲ್ಲದೆ ಭ್ರಾಮಕಲೋಕದ ಊಹಾಪೋಹ ಸಂದರ್ಭಗಳು ಹಾಗೂ ಭಾವನೆಗಳಿಂದ ತೀರ್ಮಾನಿಸುವುದು ಸಲ್ಲ.

ಸರ್ಕಾರಿ ಪ್ರವೀಣನೊಬ್ಬನ ಸಾಕ್ಷ್ಯವು ಏನೇ ಇರಲಿ, ಶಾಸನ ಸಭೆಯೊಳಗೆ ಬಾಂಬುಗಳನ್ನು ಸಿಡಿಸಿದುದರಿಂದ ಉಂಟಾಗಿರುವ ಹಾನಿ ಅತ್ಯಲ್ಪ. ಒಂದು ಖಾಲಿ ಬೆಂಚಿಗೆ ಜಖಂ ಆಗಿದೆ; ಒಂದೈದಾರು ಮಂದಿಗೆ ಅಲ್ಲೊಂದು ಇಲ್ಲೊಂದು ಕೆರೆದ ಗಾಯಗಳಾಗಿರಬಹುದು. ಇಷ್ಟು ಕಡಿಮೆ ಹಾನಿಯಾಗಿರುವುದು ಒಂದು ಪವಾಡವೇ ಸರಿ ಎಂದು ಸರ್ಕಾರಿ ವಿಜ್ಞಾನಿಗಳು ಮತ್ತು ಪ್ರವೀಣರು ಉದ್ಗರಿಸಿದ್ದಾರೆ. ಇದರಲ್ಲಿ ಪವಾಡವೇನೂ ಇಲ್ಲ: ಇರುವುದೆಲ್ಲಾ ನಿಸ್ಪೃಷ್ಟವಾದ ವೈಜ್ಞಾನಿಕ ಪ್ರಕ್ರಿಯೆ ಮಾತ್ರ. ಮೊದಲನೆಯದಾಗಿ, ಎರಡು ಬಾಂಬುಗಳೂ ಸಿಡಿದದ್ದು ಮರದ ಕಟಕಟೆಯೊಳಗಿದ್ದ ಇಳಿಮೇಜು ಮತ್ತು ಬೆಂಚುಗಳ ಬಳಿಯ ಖಾಲಿ ಜಾಗದಲ್ಲಿ; ಎರಡನೆಯದಾಗಿ, ಬಾಂಬುಗಳು ಸ್ಫೋಟಿಸಿದ ಜಾಗದಿಂದ ಎರಡು ಅಡಿಗಳ ಆಚೆಗಿದ್ದವರಿಗೆ ಕೂಡ ಅಂತಹ ಗಾಯಗಳೇನೂ ಆಗಿಲ್ಲ. ಶ್ರೀಯುತರಾದ ಪಿ. ರಾವ್, ಶಂಕರರಾವ್ ಮತ್ತು ಸರ್ ಜಾರ್ಜ್ ಶುಸ್ಟರ್ ಅವರುಗಳಿಗೆ ಯಾವ ಪೆಟ್ಟೂ ಆಗಿಲ್ಲ, ಅಥವಾ ಒಂದೆರಡು ಗೀರಿದ ಗುರುತುಗಳಾಗಿರಬಹುದು ಅಷ್ಟೆ. ಸರ್ಕಾರಿ ಪ್ರವೀಣರು ಮಾಡಿರುವ ಅಂದಾಜು

ಕಾಲ್ಪನಿಕವಾಗಿದ್ದು ಬಹಳ ಅತಿಶಯೋಕ್ತಿಯಾಗಿದೆ. ಅವರ ಕಲ್ಪನೆಗೆ ಸಮನಾದ ಬಾಂಬುಗಳನ್ನು ನಾವು ಪ್ರಯೋಗಿಸಿದ್ದಿದ್ದಲ್ಲಿ ಕಟಿಕಟಿಗಳೆಲ್ಲಾ ನುಚ್ಚು ನೂರಾಗಿ ರುತ್ತಿದ್ದುವು ಮತ್ತು ಸುತ್ತ ಹಲವು ಗಜಗಳ ಪರಿಧಿಯಲ್ಲಿರುತ್ತಿದ್ದವರೆಲ್ಲಾ ಧ್ವಂಸವಾಗಿರುತ್ತಿದ್ದರು. ಪೊಟಾಸಿಯಂ ಕ್ಲೋರೇಟ್ ಮತ್ತು ಸ್ಫೋಟಕ ಪಿಕ್ರೇಟ್‌ಗಳನ್ನು ಪರಿಣಾಮಕಾರಿಯಾಗುವಂತೆ ಮಿಶ್ರಣಮಾಡುವುದು ಹೇಗೆಂದು ಅವರಿಗೆ ತಿಳಿದಿಲ್ಲದಿರಬಹುದು.

ಅಲ್ಲದೆ, ಬೇರಾವುದಾದರೂ ಪ್ರಭಾವೀ ಸ್ಫೋಟಕ ದ್ರವ್ಯವನ್ನು ಸಣ್ಣ ಗುಂಡುಗಳೊಡನೆ ಉಪಯೋಗಿಸಿದ್ದಿದ್ದರೆ ಶಾಸನಸಭೆಯ ಬಹುತೇಕ ಸದಸ್ಯರನ್ನು ನಿರ್ನಾಮಗೊಳಿಸಲು ಅದು ಸಾಕಾಗುತ್ತಿತ್ತು. ಅಥವಾ ಕೆಲವು ಪ್ರಮುಖ ವ್ಯಕ್ತಿಗಳು ಆಸೀನರಾಗಿದ್ದ ಅಧಿಕಾರಿಗಳ ಪ್ರತ್ಯೇಕ ಸ್ಥಳಗಳತ್ತ ನಾವು ಬಾಂಬು ಗಳನ್ನು ಒಗೆಯಲೂಬಹುದಾಗಿತ್ತು. ಸಭಾಧ್ಯಕ್ಷರ ಗ್ಯಾಲರಿಯಲ್ಲಿ ಅಂದು ಸರ್ ಜಾನ್‌ಸೈಮನ್ ಕುಳಿತಿದ್ದ. ಆತನ ದುರದೃಷ್ಟದ ಆಯೋಗವಂತೂ ಎಲ್ಲಾ ಜವಾಬ್ದಾರಿ ನಾಯಕರಿಂದಲೂ ಹೀಗಳೆಯಲಾಗಿತ್ತು. ನಾವು ಮನಸ್ಸು ಮಾಡಿದರೆ ಅವನ ಮೇಲೆ ಬಾಂಬುಗಳ ಧಾಳಿ ಮಾಡಬಹುದಾಗಿತ್ತು. ಆದರೆ ಇವೆಲ್ಲಾ ನಮ್ಮ ಉದ್ದೇಶಕ್ಕೆ ಹೊರತಾಗಿದ್ದುವು. ಬಾಂಬುಗಳಿಂದ ನಾವೇನನ್ನು ಎಸಗಬೇಕೆಂದಿದ್ದೆವೋ ಅಷ್ಟನ್ನೇ ಆ ಬಾಂಬುಗಳು ಮಾಡಿದ್ದು. ಆದ್ದರಿಂದ ಈ ಘಟನೆಯಲ್ಲಿರುವ ಒಂದೇ ಪವಾಡವೆಂದರೆ ಅದನ್ನು ಅಪಾಯವಾಗದಂತಹ ಜಾಗಕ್ಕೆ ಬುದ್ಧಿಪೂರ್ವಕವಾಗಿ ಗುರಿಕಟ್ಟಿ ಎಸೆದದ್ದು.

ಆಮೇಲೆ ನಾವು ಸ್ವಯಂಪ್ರೇರಣೆಯಿಂದ ಮಾಡಿದ್ದಾದರೂ ಏನು ? ನಾವು ಮಾಡಿದ್ದುದಕ್ಕೆ ಶಿಕ್ಷೆ ಪಡೆಯಲು ತಯಾರಾಗಿದ್ದು. ವ್ಯಕ್ತಿಗಳನ್ನು ತುಳಿಯುವುದರಿಂದ ಭಾವನೆಗಳನ್ನು ಪುಡಿ ಪುಡಿಮಾಡಲು ಸಾಮ್ರಾಜ್ಯಶಾಹಿ ಶೋಷಕರಿಗೆ ಸಾಧ್ಯವಾಗದೆಂದು ತೋರಿಸಲು ನಮ್ಮ ಕೃತ್ಯ ಶಕ್ತವಾಗಿದೆ. ನಿಕೃಷ್ಟವಾದ ಎರಡು ತುಕಡಿಗಳನ್ನು ತುಳಿದುಹಾಕುವುದರಿಂದ ಒಂದು ಇಡೀ ರಾಷ್ಟ್ರವನ್ನು ತುಳಿದುಹಾಕಲು ಸಾಧ್ಯವಾಗುವುದಿಲ್ಲ. ಒಂದು ಐತಿಹಾಸಿಕ ಪಾಠವನ್ನು ಒತ್ತಿಹೇಳುವುದು ನಮ್ಮ ಇಚ್ಛೆಯಾಗಿತ್ತು : ಮುದ್ರಾಂಕಿತ ಪತ್ರ ಗಳಾಗಲೀ, ಬ್ಯಾಸ್ಟಿಲ್ ಕಾರಾಗೃಹವಾಗಲಿ, ಫ್ರಾನ್ಸಿನ ಕ್ರಾಂತಿಕಾರಿ ಚಳುವಳಿ ಯನ್ನು ಧ್ವಂಸಮಾಡಲು ಅಶಕ್ತವಾಗಿದ್ದವು ; ನೇಣುಗಂಬಗಳು ಹಾಗೂ ಸೈಬೀರಿಯಾದ ಸಿಡಿಮದ್ದುಗಳು ರಷ್ಯಾದ ಕ್ರಾಂತಿಯನ್ನು ತಡೆಹಿಡಿಯಲಿಲ್ಲ ; ರಕ್ತಸಿಕ್ತ ಭಾನುವಾರ, ಇತ್ಯಾದಿ ಕ್ರೌರ್ಯಗಳು ಐರ್ಲೆಂಡಿನ ಸ್ವಾತಂತ್ರ್ಯವನ್ನು ಹಿಚುಕಿಹಾಕಲು ಸಮರ್ಥವಾಗಲಿಲ್ಲ.

ಆರ್ಡಿನೆನ್ಸ್‌ಗಳು ಮತ್ತು ರಕ್ಷಣಾ ಕಾಯಿದೆಗಳು ಭಾರತದ ಸ್ವಾತಂತ್ರ್ಯದ ಜ್ವಾಲೆಯನ್ನು ನಂದಿಸಲು ಸಮರ್ಥವಾದಾವೇನು ? ಮೋಸದ ಅಥವಾ ನೈಜವಾದ ಪಿತೂರಿಯ ಮೊಕದ್ದಮೆಗಳಾಗಲೀ, ಮಹಾನ್ ಆದರ್ಶದ ಕನಸನ್ನು ಸವಿಯುವ ಎಲ್ಲ ಯುವಕರನ್ನೂ ಬಂಧಿಸುವುದಾಗಲಿ, ಕ್ರಾಂತಿಯ ಮುನ್ನಡೆಯನ್ನು ಪ್ರತಿ ಬಂಧಿಸಲಾರವು. ಆದರೆ ಸಾಮಯಿಕವಾದ ಎಚ್ಚರಿಕೆಯನ್ನು ಕಡೆಗಾಣಿಸದಿದ್ದಲ್ಲಿ ಬಹುಶಃ ಅಧಿಕವಾದ ಸಾವುನೋವುಗಳನ್ನು ತಡೆಗಟ್ಟಬಹುದು.

ಇಂತಹ ಎಚ್ಚರಿಕೆಯನ್ನು ನೀಡುವ ಜವಾಬ್ದಾರಿಯನ್ನು ನಾವು ವಹಿಸಿದ್ದೇವೆ ; ಅಲ್ಲಿಗೆ ನಮ್ಮ ಕರ್ತವ್ಯ ಪೂರ್ಣಗೊಂಡಿದೆ.

ಕೆಳಗಿನ ನ್ಯಾಯಾಲಯದಲ್ಲಿ ನಮ್ಮ ಕ್ರಾಂತಿಯ ಕಲ್ಪನೆಯಾದರೂ ಏನೆಂಬ ಪ್ರಶ್ನೆಯನ್ನು ಹಾಕಲಾಗಿತ್ತು. ಅದಕ್ಕೆ ನಮ್ಮ ಉತ್ತರ ಇದು : "ಕ್ರಾಂತಿ" ಎಂದರೆ ರಕ್ತಗೆಂಪಿನ ಸಂಘರ್ಷವೇ ಆಗಿರಬೇಕೆಂಬ ನಿಯಮವೇನೂ ಇಲ್ಲ. ವೈಯಕ್ತಿಕ ಜಿದ್ದಿಗೂ ಅಲ್ಲಿ ಅವಕಾಶವಿಲ್ಲ. ಕ್ರಾಂತಿಯು ಬಾಂಬು ಮತ್ತು ಪಿಸ್ತೂಲುಗಳ ಆರಾಧನೆಯಲ್ಲ. ನಮ್ಮ ದೃಷ್ಟಿಯಲ್ಲಿ "ಕ್ರಾಂತಿ" ಎಂದರೆ ಸ್ಪಷ್ಟವಾಗಿ ಅನ್ಯಾಯದ ಬುನಾದಿಯ ಮೇಲೆ ರಚಿತವಾಗಿರುವ ಇಂದಿನ ವ್ಯವಸ್ಥೆ ಬದಲಾಗಬೇಕು ಎಂದರ್ಥ. ಉತ್ಪಾದಕರು ಅಥವಾ ದುಡಿಮೆಗಾರರು ಸಮಾಜದ ಅತ್ಯಂತ ಅವಶ್ಯಕವಾದ ಅಂಗವಾಗಿದ್ದಾಗ್ಯೂ ಶೋಷಕರಿಂದ ವಂಚಿತವಾಗಿದ್ದಾರೆ. ಅವರ ದುಡಿಮೆಯ ಫಲ ಅವರಿಗೆ ದಕ್ಕುತ್ತಿಲ್ಲ ; ಅವರ ಅತಿಸಾಮಾನ್ಯವಾದ ಹಕ್ಕುಗಳನ್ನು ಅವರಿಂದ ಕಿತ್ತುಕೊಳ್ಳಲಾಗಿದೆ. ಎಲ್ಲರಿಗೂ ಬೇಕಾದ ಧಾನ್ಯಗಳನ್ನು ಬೆಳೆಯುವ ರೈತ ತನ್ನ ಕುಟುಂಬದವರೊಡನೆ ಹಸಿವಿನಿಂದ ನರಳುತ್ತಿದ್ದಾನೆ ; ಇಡೀ ಜಗತ್ತಿನ ಮಾರುಕಟ್ಟೆಯನ್ನು ತಾನು ನೇಯುವ ಬಟ್ಟೆಯಿಂದ ತುಂಬುವ ನೇಯ್ಗೆಗಾರ ತನ್ನ ಮತ್ತು ತನ್ನ ಮಕ್ಕಳ ಶರೀರವನ್ನು ಮುಚ್ಚಲು ಬೇಕಾದ ಕನಿಷ್ಠವಾದ ಬಟ್ಟೆಯನ್ನೂ ಪಡೆದಿಲ್ಲ. ಮನೆ ಕಟ್ಟುವವರು, ಕಮ್ಮಾರರು ಮತ್ತು ಬಡಗಿಗಳು ಭವ್ಯವಾದ ಸೌಧಗಳನ್ನೇ ಕಟ್ಟುತ್ತಿದ್ದಾರಾದರೂ ಕೊಳಚೆ ಪ್ರದೇಶಗಳಲ್ಲಿ ಜಾತಿಭ್ರಷ್ಟರಾಗಿ ಉಳಿದಿದ್ದಾರೆ. ಸಮಾಜದ ಪರತಂತ್ರ ಜೀವಿಗಳಾದ ಬಂಡವಳಿಗರು ಮತ್ತು ಶೋಷಕರು ಮನಸೋಇಚ್ಛೆಯಂತೆ ಮಿಲಿಯಗಟ್ಟಲೆ ಹಣವನ್ನು ಚೆಲ್ಲಬಲ್ಲರು. ಈ ಭಯಂಕರ ಅಸಮಾನತೆಗಳೂ ಬಲಾತ್ಕಾರವಾಗಿ ಸೆಳೆಯಲ್ಪಟ್ಟಿರುವ ಅವಕಾಶಗಳ ಅಸಮತೆಯೂ ಅಸ್ತವ್ಯಸ್ತತೆಗೆ ಹಾದಿಮಾಡಿಕೊಟ್ಟೇ ತೀರುತ್ತವೆ. ಈ ರೀತಿಯ ವ್ಯವಸ್ಥೆ ಬಹುಕಾಲ ಉಳಿಯಲಾರದು. ಸಮಾಜದ ವ್ಯವಸ್ಥೆಯಲ್ಲಿ ಇಂದು ಕಾಣಬರುವ ಮೋಜು ಅಗ್ನಿ ಪರ್ವತದ ಅಂಚಿನಲ್ಲಿರುವ ಮೋಜೆಂಬುದು ಸ್ವಯಂಸಿದ್ಧವಾಗಿದೆ.

ಈ ನಾಗರೀಕತೆಯ ಭವ್ಯಕಟ್ಟಡವನ್ನು ಸಕಾಲದಲ್ಲಿ ಉಳಿಸದಿದ್ದರೆ ಅದು ಕುಸಿದು ಭಗ್ನವಾಗುವುದು ಖಂಡಿತ. ಆದ್ದರಿಂದ ಆಮೂಲಾಗ್ರವಾದ ಬದಲಾವಣೆ ಅತ್ಯವಶ್ಯಕ. ಅದನ್ನು ತಿಳಿದವರ ಕರ್ತವ್ಯ ಸಮಾಜವನ್ನು ಸಮಾಜವಾದಿ ಆಧಾರದ ಮೇಲೆ ಪುನರ್ರಚಿಸುವುದಾಗಿದೆ. ಇದನ್ನು ಮಾಡಿದ ಹೊರತು, ಅರ್ಥಾತ್ ಮಾನವನನ್ನು ಮಾನವ ಹಾಗೂ ಒಂದು ರಾಷ್ಟ್ರವನ್ನು ಇನ್ನೊಂದು ರಾಷ್ಟ್ರವು ಶೋಷಿಸುವುದನ್ನು ಅಂತ್ಯಗೊಳಿಸಿದ ಹೊರತು, ಮಾನವ ಜನಾಂಗ ವನ್ನು ಇಂದು ಬಾಧಿಸುತ್ತಿರುವ ಪಡಿಪಾಟು ಮತ್ತು ಕಗ್ಗೊಲೆಗಳನ್ನು ತಡೆಯು ಲಾಗುವುದಿಲ್ಲ. ಇಂದಿನ ವ್ಯವಸ್ಥೆಯ ಹಿನ್ನೆಲೆಯಲ್ಲಿ ಯುದ್ಧವನ್ನು ನಿರ್ನಾಮ ಗೊಳಿಸುವ ಹಾಗೂ ಶಾಂತಿಯ ಸರ್ವೋದಯವನ್ನು ಸೃಷ್ಟಿಸುವ ಎಲ್ಲ ಮಾತುಗಳೂ ಅನಾಚ್ಛಾದಿತ ಕಪಟತನದ ಮಾತುಗಳೇ ಆಗುತ್ತವೆ.

'ಕ್ರಾಂತಿ' ಎಂದರೆ ನಮ್ಮ ಕಲ್ಪನೆಯಲ್ಲಿ ಅಂತಿಮವಾಗಿ ಇಂತಹ ಆಘಾತ ಗಳಿಗೆ ತುತ್ತಾಗದಂತಹ ಸಮಾಜ ವ್ಯವಸ್ಥೆಯೊಂದರ ನಿರ್ಮಾಣ. ಅಲ್ಲಿ ದುಡಿಮೆ ಗಾರನ ಸಾರ್ವಭೌಮತ್ವವನ್ನು ಎಲ್ಲರೂ ಮಾನ್ಯ ಮಾಡುತ್ತಾರೆ. ಬಂಡವಾಳ ಶಾಹಿ ಪದ್ಧತಿ ಮತ್ತು ಸಾಮ್ರಾಜ್ಯಶಾಹಿ ಯುದ್ಧಗಳ ಪಿಡುಗಿನಿಂದ ಮಾನವ ಜನಾಂಗಕ್ಕೆ ಮುಕ್ತಿ ದೊರಕಬೇಕು : ಅದು ಜಾಗತಿಕ ಒಕ್ಕೂಟದ ಕೊಡುಗೆ ಯಾಗಿರುತ್ತದೆ.

ಇದು ನಮ್ಮ ಆದರ್ಶ. ನಮ್ಮ ಸ್ಫೂರ್ತಿಗೆ ಈ ಸಿದ್ಧಾಂತವೇ ಜೀವ ಕೊಟ್ಟಿರುವುದು. ನಾವು ಸಾಕಷ್ಟು ಪ್ರಭಾವಶಾಲಿಯೂ ಪ್ರಬಲವೂ ಆದ ಎಚ್ಚರವನ್ನು ನೀಡಿದ್ದೇವೆಂದು ಭಾವಿಸುತ್ತೇವೆ.

ಆದಕ್ಕೇನಾದರೂ ಅಸಡ್ಡೆಯ ಪ್ರತಿಕ್ರಿಯೆಯನ್ನೂ ತೋರಿಸಿ ಇಂದಿನ ಸರ್ಕಾರದ ವ್ಯವಸ್ಥೆಯು ಮುಂದುವರಿಯುವಂತಾದರೆ ಮಹಾಪೂರದಂತೆ ಬೆಳೆಯುತ್ತಿ ರುವ ಸ್ವಾಭಾವಿಕ ಶಕ್ತಿಗಳಿಗೆ ಅಡಚಣೆಯನ್ನುಂಟುಮಾಡಿದಂತೆಯೆ ಸರಿ. ಆ ಅಡಚಣೆಗಳನ್ನು ಕಿತ್ತೊಗೆಯಲು ಒಂದು ಉಗ್ರವಾದ ಹೋರಾಟವನ್ನೇ ನಡೆಸ ಬೇಕಾಗುತ್ತದೆ. ಕ್ರಾಂತಿಯ ಆದರ್ಶವು ಪರಿಪೂರ್ಣವಾಗಿ ನೆರವೇರಬೇಕಾದರೆ ದುಡಿಯುವ ವರ್ಗದ ಅಧಿಕಾರ ಅಸ್ತಿತ್ವಕ್ಕೆ ಬರಬೇಕು. ಕ್ರಾಂತಿಯು ಮಾನವ ಜನಾಂಗದ ಪ್ರಶ್ನಾತೀತವಾದ ಹಕ್ಕು. ಸ್ವಾತಂತ್ರ್ಯವು ಎಂದೂ ಕ್ಷಯವಾಗದ ಆಜನ್ಮಸಿದ್ಧಹಕ್ಕು. ಸಮಾಜದ ನಿಜವಾದ ಆಧಾರಸ್ತಂಭ ದುಡಿಮೆ. ದುಡಿಮೆ ಗಾರರ ಅಂತಿಮಗುರಿ ಜನತೆಯ ಸಾರ್ವಭೌಮತ್ವ.

ಈ ಆದರ್ಶಗಳಿಗಾಗಿ ಮತ್ತು ಈ ನಂಬಿಕೆಗಾಗಿ ನಮಗೆ ವಿಧಿಸಬಹುದಾದ ಯಾವುದೇ ಶಿಕ್ಷೆ ಅಥವಾ ಸಂಕಷ್ಟವನ್ನು ನಾವು ಹೃತ್ಪೂರ್ವಕವಾಗಿ ಸ್ವಾಗತಿಸುತ್ತೇವೆ. ಕ್ರಾಂತಿಯ ಈ ಬಲಿಪೀಠಕ್ಕೆ ನಮ್ಮ ಯೌವ್ವನದ ಸುಗಂಧವನ್ನು ಲೇಪಿಸಲು ಬಂದಿದ್ದೇವೆ. ಅಷ್ಟು ಉದಾತ್ತವಾದ ಧ್ಯೇಯಕ್ಕೆ ಎಂತಹ ತ್ಯಾಗವೂ ಅತಿಶಯವೆನಿಸುವುದಿಲ್ಲ. ನಮಗೆ ತೃಪ್ತಿಯಿದೆ. ಕ್ರಾಂತಿಯು ಮೊಳಗುವುದನ್ನು ನಾವು ನಿರೀಕ್ಷಿಸುತ್ತೇವೆ. ಕ್ರಾಂತಿ ಚಿರಾಯುವಾಗಲಿ.

# ನಾಟಕದ ಕೆಲವು ಅಂಶಗಳು

(ಕಳೆದ ಸಂಚಿಕೆಯಿಂದ)

---

—ಕೆ.ಎಸ್. ರಂಗನಾಥ್

**ನಾಟಕದ ವಿಭಾಗಗಳು :**

ನಾಟಕವನ್ನು ಟ್ರಾಜಿಡಿ, ಕಾಮಿಡಿ, ಫಾರ್ಸ್ ಎಂದು ಅನೇಕ ವಿಧವಾಗಿ ವಿಂಗಡಿಸುತ್ತೇವೆ. ದುಃಖಾಂತವನ್ನು ಹೊಂದಿರುವುದು ದುರಂತ (ಟ್ರಾಜಿಡಿ) ಎಂದೂ, ಸುಖಾಂತವನ್ನು ಹೊಂದಿರುವುದು ಕಾಮಿಡಿ (ಪ್ರಹಸನ) ಎಂದು ಹೇಳುತ್ತೇವೆ. ಆದರೆ ಇದು ಎಷ್ಟರ ಮಟ್ಟಿಗೆ ಸತ್ಯ? ಷೇಕ್ಸ್‌ಪಿಯರಿನ 'ಮೆಶರ್ ಫಾರ್ ಮೆಶರ್', ಹಾಸ್ಯದ ಅಂಶಗಳನ್ನು ಹೊಂದಿಲ್ಲದಿದ್ದರೂ, ಅದನ್ನು ಕಾಮಿಡಿ ಎಂದು ಕರೆದರು. ಕಾರಣ, ಶವವಿಲ್ಲದೆ ಮುಕ್ತಾಯಗೊಳ್ಳುವುದು. ಇದೇ ರೀತಿ, ವಿಂಟರ್ಸ್ ಟೇಲ್, ರೊಮಾನ್ಸ್ ಆಯಿತು. ಏಕೆಂದರೆ ಇಲ್ಲಿ ಕೊನೆಯಲ್ಲಿ ಒಂದು ಸೌಹಾರ್ದ ವಾತಾವರಣ ಮೂಡುತ್ತದೆ. ಷೇಕ್ಸ್‌ಪಿಯರಿನ ಐತಿಹಾಸಿಕ ನಾಟಕಗಳಲ್ಲಿ ಘೋರ ಕೊಲೆಗಳು ಸಮೃದ್ಧವಾಗಿದ್ದರೂ, ಇವನ್ನು ಟ್ರಾಜಿಡಿ ಎಂದು ಕರೆಯುವುದಿಲ್ಲ. **'ಹೆನ್ರಿ iv'** ನಲ್ಲಿ ಹಾಸ್ಯರಸ ಹೆಚ್ಚಾಗಿದ್ದರೂ ಅದನ್ನು ಕಾಮಿಡಿ ಎಂದು ಕರೆಯುವುದಿಲ್ಲ. ಈ ಒಂದು ವಿಭಿನ್ನತೆ ಏಕೆ? ಐತಿಹಾಸಿಕ ನಾಟಕಗಳು ವಸ್ತುವನ್ನು ಅವಲಂಬಿಸಿರುವುದೇ ಇದಕ್ಕೆ ಕಾರಣವೇ?

ಅರಿಸ್ಟಾಟಲಿನ ಸಿದ್ಧಾಂತದ ರೀತ್ಯ ದುರಂತ ನಾಟಕದ ನಾಯಕ ಗಣ್ಯವ್ಯಕ್ತಿಯಾಗಿರಬೇಕು, ರಾಜಮನೆತನದವನಾಗಿರಬೇಕು. ಇದನ್ನು ಫ್ರೆಂಚ್ ನಾಟಕಕಾರರೂ ಬಳಸಿದರು. ಆದರೆ ಹದಿನೆಂಟನೇ ಶತಮಾನದಲ್ಲಿ ಮಧ್ಯಮ ವರ್ಗದ ನಾಯಕರನ್ನು ರಂಗದ ಮೇಲೆ ತಂದ ಮೇಲೆ, ಈ ನಾಟಕಗಳನ್ನು ಪ್ರೇಕ್ಷಕರು ಕ್ಷುಲ್ಲಕವೆಂದು ಕರೆದರು. ಆಗ ಇಂತಹ ನಾಟಕಗಳು ಭೂರ್ಜ್ವಗಳಾದುವು, (bourgeois tragedy) ಅಥವಾ ಸಾಮಾನ್ಯ ದುರಂತಗಳಾದವು (Domestic tragedy).

ಚೆಕೋವ್ ತನ್ನ ನಾಟಕ **ಚೆರ್ರಿ ಆರ್ಚರ್ಡ್**ಅನ್ನು 'ಕಾಮಿಡಿ' ಎಂದು ಕರೆದ. ಆದರೆ ಅದರ ನಿರ್ದೇಶಕ ಸ್ಟೆಂಸ್ಲಾವಿಸ್ಕಿಗೆ 'ಟ್ರಾಜಿಡಿ'ಯಾಗಿ ಕಂಡುಬಂತು. ಮೆಡಮ್ ರೆನವಿಸ್ಕಿ ತನ್ನ ಅಸಾಮರ್ಥ್ಯ, ದೃಡನಿಲುವಿಲ್ಲದ, ಸೋಮಾರಿತನ, ಆತ್ಮಶಕ್ತಿಯಿಲ್ಲದಿದ್ದರಿಂದ, ಕಳೆದುಕೊಂಡ ಸಂಪತ್ತು ಕಾಮಿಡಿಯಾಗಿ ಕಾಣ ಲಾಗದು. ಇದು ಹೆಚ್ಚುತ್ತಿರುವ ವ್ಯಾಪಾರಿತನ, ಜನರ ಕೀಳುತನ, ಕಟುಕತನಗಳ ಮೂಕಸಾಕ್ಷಿಯಾಗಿ ಕಂಡರೆ, ಇದು ಟ್ರಾಜಿಡಿ ಅಲ್ಲದೆ ಮತ್ತೇನು ?

ನಗುವು ಏಕೆ ಬರುತ್ತದೆ ? ಫ್ರಾಯ್ಡ್‌ನ ಪ್ರಕಾರ ನಗು, ನಮ್ಮ ಕಾತುರತೆಯ ಅಥವಾ ಆತಂಕ ನಿವಾರಣೆಯಿಂದ ಬರುತ್ತದೆ. ಯಾವಾಗ ಒಂದು ದುರದೃಷ್ಟಕರ ಸನ್ನಿವೇಶ ನಮ್ಮ ಹತ್ತಿರಕ್ಕೆ ಬರದೇ ಹೋಗುವುದೋ ಆಗ ನಮ್ಮ ನರಗಳು ನಗುವನ್ನು ಪ್ರಚೋದಿಸುತ್ತವೆ. ಟ್ರಾಜಿಡಿಯಲ್ಲಿ ನಮ್ಮ ಕಾತುರತೆಯು ನಿವಾರಣೆಯಾಗುವುದಿಲ್ಲ : ನಾವು ಪಾತ್ರದ ದುಃಖವನ್ನು ಅನು ಭವಿಸುತ್ತೇವೆ. ಕಾಮಿಡಿಯಲ್ಲಿ ನಮ್ಮ ಕಾತುರತೆ ಕಡಿಮೆಯಾಗುತ್ತದೆ ; ನಾವು ಪಾತ್ರಕ್ಕೇ ಅನುಕಂಪವನ್ನು ತೋರಿಸುತ್ತೇವೆ. ಹಾಗೆಯೇ ಫಾರ್ಸ್‌ನಲ್ಲಿ ಅಂತಹ ಸನ್ನಿವೇಶ ನಮಗೆ ಬರುವುದಿಲ್ಲವಾದ್ದರಿಂದ ನಗುತ್ತೇವೆ. ಉದಾಹರಣೆಗೆ ಲಾರೆಲ್ ಮತ್ತು ಹಾರ್ಡಿಯ ಚಿತ್ರಗಳನ್ನೇ ತೆಗೆದುಕೊಳ್ಳಿ. ಇಲ್ಲಿ ನಮ್ಮ ನಗು ಲಾರೆಲ್ ಹಾಗೂ ಹಾರ್ಡಿಯ ಪರದಾಟಗಳು ನಮ್ಮ ಅನುಭವಕ್ಕೆ ಬರುವುದಿಲ್ಲವೆಂಬ ಸಂತೋಷದಿಂದ, ಚಾರ್ಲಿಚಾಪ್ಲಿನ್‌ನ **ಮಾಡ್ರನ್ ಟೈಮ್ಸ್**‌ನಲ್ಲಿ ಯಂತ್ರದ ಮೂಲಕ ಊಟ ಮಾಡಿಸುವುದು ನಮ್ಮ ವಾಸ್ತವತೆಗೆ ಹೊರತಾಗಿ ಇರುವುದರಿಂದ ನಾವು ನಗುತ್ತೇವೆ. ವಾಲ್ಪೋನ್‌ನ ಗುಳ್ಳೆನರಿತನ, ಟಾರ್‌ಟುಫ್‌ನ ಮೋಸಗಾರಿಕೆ ; ನಾವು ಅಂತಹ ಬಲೆಯಲ್ಲಿ ಬೀಳುವುದಿಲ್ಲವೆಂಬ ನಂಬಿಕೆ ನಮ್ಮನ್ನು ನಗೆಗೀಡು ಮಾಡುತ್ತದೆ.

ಪಾತ್ರಗಳ ಬಗ್ಗೆ ಹೆಚ್ಚಿನ ತಿಳುವಳಿಕೆ ಇದ್ದರೆ ಪ್ರೇಕ್ಷಕರು ನಗಲು ಸಾಧ್ಯ. ಟಾರ್‌ಟುಫ್ ಆರ್ಗನನನ್ನು ಮೋಸಗೊಳಿಸುವುದು ಪ್ರಹಸನದ ಪ್ರಸಂಗವಾಗುತ್ತದೆ. ಆರ್ಗನ್ನನಿಗೆ ಟಾರ್ಟುಫ್‌ನ ಕುಟಿಲತೆ ತಿಳಿಯುವುದಿಲ್ಲ. ಆದರೆ ನಮಗೆ ಟಾರ್ಟುಫ್‌ನ ಚತುರತೆ ತಿಳಿದಿರುತ್ತದೆ. ಹಾಗೆಯೇ ಪಾತ್ರಗಳ ಬಗ್ಗೆ ತಿಳಿವಳಿಕೆ ಕಡಿಮೆಯಾದಂತೆ ಕುತೂಹಲ ಹೆಚ್ಚಾಗುತ್ತದೆ. ಈ ಪಾತ್ರಗಳ ಬಗ್ಗೆ ತಿಳುವಳಿಕೆ ಹೆಚ್ಚಾದಂತೆ ನಾವು ನಾಟಕದಲ್ಲಿ ಹೆಚ್ಚಿನ ಉತ್ಸುಕತೆಯನ್ನು ತೋರಿಸುತ್ತೇವೆ, ಇಷ್ಟಲ್ಲದೆ ಮೋಸ ಹೋಗುವ ಪಾತ್ರಗಳಿಗೆ ನಮ್ಮ ಅನುಕಂಪ ಮೂಡಿ, ಮೋಸ ಹೋಗಬೇಡಿ' ಎನ್ನುವ ಕೂಗು ನಮ್ಮ ಮನಸ್ಸಿನಲ್ಲಿ ಸ್ಫುಟಿಸುತ್ತದೆ. ವ್ಯಾಪಾರಿ ಕಾರ್ವಿನೋ ವಾಲ್ಪೋನಿನ ಮಾತಿಗೆ ಮರುಳಾಗಿ ತನ್ನ ಪತ್ನಿಯನ್ನು ವಾಲ್ಪೋನಿನ ಮಂಚಕ್ಕೆ

ನೂಕುವಾಗ, ನಮಗೆ 'ಅಯ್ಯೋ' ಎನಿಸುವುದು ಸಹಜ. ಇದು ಉತ್ತಮ ಪ್ರಹಸನದ ಒಂದು ಗುಣವೆನ್ನಬಹುದು. ಕೊನೆಗೆ ನ್ಯಾಯ ಪ್ರದಾನ ಮಾಡುವ ದೃಶ್ಯದಲ್ಲಿ ಈ ಆತಂಕ, ಕಾತುರತೆ ಕಳೆದು ನಗುವು ಹೊರಸೂಸುತ್ತದೆ. ಟ್ರಾಜಿಡಿ ಇಂತಹ ಕಾತುರತೆಯಿಂದ ಮುಕ್ತಿ ಕೊಡುವುದಿಲ್ಲ. ಆದರೂ ಒಂದು ಟ್ರಾಜಿಡಿ ಯನ್ನು ನೋಡಿದಮೇಲೆ, ಅದನ್ನು ಮುಕ್ತಕಂಠದಿಂದ ಶ್ಲಾಘಿಸುತ್ತೇವೆ. ಹ್ಯಾಮ್ಲೆಟ್, ಮ್ಯಾಕ್ಬೆತ್, ಕಿಂಗ್‌ಲಿಯರ್–ಮುಂತಾದ ಟ್ರಾಜಿಡಿಗಳು ಇನ್ನೂ ಪ್ರದರ್ಶನ ಕಾಣುತ್ತಿವೆ. ಒಂದು ಟ್ರಾಜಿಡಿಯನ್ನು ನೋಡಿದಾಗ ನಮ್ಮಲ್ಲಿ ಸಂಭವಿಸುವ ಮನಸಿನ ಪರಿಣಾಮವೇ ಇದಕ್ಕೆ ಕಾರಣ ಎನ್ನಬಹುದು. ಮ್ಯಾಕ್ಬೆತ್ ಹ್ಯಾಮ್ಲೆಟ್, ಲಿಯರ್, ತಮ್ಮ ದುರದೃಷ್ಟಕರ ಸನ್ನಿವೇಶಗಳನ್ನು ಹೇಗೆ ಎದುರಿಸು ತ್ತಾರೆಂಬುದು ನಮ್ಮ ಮನಸ್ಸಿನಲ್ಲಿ ಒಂದು ಎತ್ತರದ ಭಾವನೆಯನ್ನು ಉಂಟು ಮಾಡುತ್ತದೆ. ಪಾತ್ರಗಳು ಹೇಗೆ ವಿಧಿಯನ್ನು ಅನುಭವಿಸುತ್ತಾರೆ ಎಂಬುದನ್ನು ಅರಿತು ಅವರ ದುರದೃಷ್ಟದಲ್ಲಿ ನಾವು ಭಾಗಿಗಳಾದಾಗ ಮನುಷ್ಯನಲ್ಲುಂಟಾದ ದ್ವಂದ್ವಗಳ, ಹಾಗೂ ಅವನ ಸುತ್ತಲಿನ ಜಗತ್ತು ಬೀರುವ ಪರಿಣಾಮದ ಅನುಭವ ವಾಗುತ್ತದೆ. ಇದು ನಮ್ಮ ದೈನಂದಿನ ಜೀವಿತದಿಂದ ದೂರವಾಗಿರುತ್ತದೆ.

ಕಾಮಿಡಿ ನಮ್ಮ ನಿಜಜೀವನದ ಕತೆಯಾಗಬಹುದು, ಇದು ಮನುಷ್ಯನ ದೈನಂದಿನ ಜೀವನದಲ್ಲಿ ಉಂಟಾಗುವ ನಾದ ಉನ್ಮಾದಗಳನ್ನು ತೋರಿಸುವು ದಷ್ಟೇ ಅಲ್ಲದೆ ಸಮಾಜದ ನೀತಿ ನಡವಳಿಕೆಗಳನ್ನೂ ಪ್ರತಿಬಿಂಬಿಸುತ್ತದೆ. ಷಾ ನ **ಪಿಗ್ಮಾಲಿನ್** ಸಮಾಜದ ಮೇಲ್ದರ್ಜೆ ಹಾಗೂ ಕೆಳದರ್ಜೆ ವ್ಯಕ್ತಿಗಳ ಜೀವನ ಕ್ರಮವನ್ನು ಪ್ರತಿಬಿಂಬಿಸುತ್ತದೆ. ಗೊಗೋಲ್‌ನ **ದಿ ಗೌರ್ನಮೆಂಟ್ ಇನ್ಸ್‌ಪೆಕ್ಟರ್** ಜಾರ್ ಆಳ್ವಿಕೆಯ ಲಂಚಗುಳಿತನವನ್ನು ತೋರಿಸುತ್ತದೆ.

ಫಾರ್ಸ್ ಬರಿಯ ಹಾಸ್ಯಕ್ಕಷ್ಟೇ ಮೀಸಲಿಲ್ಲ ; ಇದು ಸಾಮಾಜಿಕ ವಿಡಂಬನೆಯೂ ಹೌದು. ಚಾರ್ಲಿ ಚಾಪ್ಲಿನ್‌ನ ಚಿತ್ರಗಳು ನಮ್ಮ ಯಾಂತ್ರಿಕ ಬದುಕು, ಗೌರವ, ಅಂತಸ್ತುಗಳಿಗಾಗಿ ಪಡುವ ಪರದಾಟಗಳ ಒಂದು ಚಿತ್ರಣ ವಷ್ಟೇ !

ಚೆಕೋವ್, ಬ್ರೆಕ್ಟ್, ಐಯನೆಸ್ಕೊ, ಬೆಕೆಟ್, ಪಿರಂಡೆಲೋ ಮೊದಲಾ ದವರ ನಾಟಕಗಳು ಟ್ರಾಜಿ–ಕಾಮಿಡಿ ಎಂಬ ಹೊಸಪ್ರಕಾರದಲ್ಲಿ ಸೇರುತ್ತವೆ. ಇಲ್ಲಿ ಹಾಸ್ಯ ವಿಡಂಬನೆ, ದುರಂತ ಎಲ್ಲವೂ ಸಮ್ಮಿಶ್ರವಾಗಿವೆ. ಇತ್ತೀಚಿನ ಟ್ರಾಜಿ–ಕಾಮಿಡಿಗಳು ನಿರಾಸೆಯಿಂದ ಪ್ರಾರಂಭವಾಗಿ, ಆಶಾಭಾವದಿಂದ ಕೊನೆ ಗೊಳ್ಳುತ್ತವೆ. ಬೆಕೆಟ್‌ನ **ಗಾಡೊ** ಇದಕ್ಕೆ ಒಂದು ಉತ್ತಮ ನಿದರ್ಶನ. ಇಲ್ಲಿ ಪಾತ್ರಗಳು ವಿದೂಷಕರಂತೆ ವರ್ತಿಸುತ್ತಾರೆ. ಇವರ ಮಾತುಗಳು, ಮಾಡಿದ್ದನ್ನೇ

ಮಾಡುವ ಅಭಿನಯಗಳು ಮಾನವನ ಅರ್ಥಹೀನ ಬದುಕನ್ನು ಸೂಚಿಸುತ್ತದೆ. ಟ್ರ್ಯಾಜಿಡಿ, ಕಾಮಿಡಿ ಹಾಗೂ ಫಾರ್ಸ್‌ಗಳನ್ನು ಒಟ್ಟಾಗಿ ತೋರಿಸುವ ವಿಧಾನ ದಲ್ಲಿ ಇದು ಒಂದು.

ನಾಟಕದ ವಿಭಾಗಗಳನ್ನು ತಿಳಿಯುವುದು ನಿರ್ದೇಶಕನಿಗೆ ಅವಶ್ಯ. ಇದು ನಾಟಕದ ಪ್ರದರ್ಶನದ ಬಗ್ಗೆ ಅವನಿಗೆ ಸೂಕ್ತ ತಿಳುವಳಿಕೆ ನೀಡುತ್ತದೆ. ನಾಟಕವನ್ನು ಪ್ರದರ್ಶಿಸುವುದು, ಅದಕ್ಕೆ ತಕ್ಕಂತೆ ಮಾರ್ಪಾಟು ಮಾಡುವುದು ನಿರ್ದೇಶಕನಿಗೆ ಸೇರಿದ್ದು. ಅಂದಮಾತ್ರಕ್ಕೆ, ಅಡಿಗೆಯ ರುಚಿ ತಿನ್ನುವುದರಲ್ಲಿದೆ, ಎಂದರೆ, ಅಡಿಗೆಯ ವಿಧಾನ ಮುಖ್ಯವಲ್ಲವೇ ?

ನಾಟಕ ಬರಿಯ ಭ್ರಮೆ ಎನಿಸಬಹುದು. ಜೀವಂತ ನಟರು ಹಾಗೂ ರಂಗ ಪರಿಕರಗಳನ್ನು ಬಿಟ್ಟರೆ, ನಾಟಕ ಬರಿಯ ಭ್ರಮೆ ಎನಿಸುವುದು ಸಹಜ. ಮ್ಯಾಕ್ಬೆತ್ ಹಾಗೂ ಮ್ಯಾಕ್‌ಡಫ್‌ರ ಕಾಳಗವನ್ನು ನೋಡುವಾಗ ನಟರ ಪ್ರತಿಭೆಯನ್ನು ಮೆಚ್ಚುತ್ತೇವೆ. ಇಲ್ಲಿ ಮ್ಯಾಕ್ಬೆತ್ ಮೃತನಾಗುವುದಿಲ್ಲವೆಂಬುದು ನಮಗೇ ತಿಳಿದಿರುತ್ತದೆ. ಪ್ರೇಕ್ಷಕರು ನಟರ ಪ್ರತಿಭೆಯನ್ನು ನೋಡಲು ಹಣ ಕೊಡುತ್ತಾರೇ ವಿನಹ ನೈಜಮ್ಯಾಕ್ಬೆತ್ ಕಾಣಿಸುವನೆಂದಲ್ಲ. ಸಿರಾಂಡೆಲೊವಿನ **ಸಿಕ್ಸ್‌ಕ್ಯಾರೆಕ್ಟರ್ಸ್** ನಾಟಕ ಒಂದು ಕಾಲ್ಪನಿಕ ಎಂದು ತೋರಿಸುತ್ತಿದೆ. ಇಲ್ಲಿ ಪಾತ್ರಗಳು ಪ್ರೇಕ್ಷಕರ ಸಮ್ಮುಖದಿಂದಲೇ ರಂಗದ ಮೇಲೆ ಒಂದು ವಸ್ತುವನ್ನು ನಿರೂಪಿಸುತ್ತವೆ. ಬೆಕೆಟ್‌ನ **ಗಾಡೋವಿನಲ್ಲಿ** ಪ್ರೇಕ್ಷಕರ ಬಗ್ಗೆ ಸೂಚನೆಗಳಿವೆ. ಐಯೋನೆಸ್ಕೊವಿನ **ಬೊಕ್ಕತಲೆಯ ನರ್ತಕಿಯ** ಮೊದಲ ಸಂಚಿಕೆಯಲ್ಲಿ ಲೇಖಕನೇ ರಂಗದ ಮೇಲೆ ಬಂದು ಪ್ರಸ್ತಾವಿಸುವ ಪ್ರಸಂಗವಿತ್ತಂತೆ. ಗೊಗೋಲನ **ಇನ್ಸ್‌ಪೆಕ್ಟರ್ ಜನರಲ್** ನಾಟಕದಲ್ಲಿ ಪ್ರೇಕ್ಷಕರೊಂದಿಗೆ ನೇರವಾಗಿ ಸಂಭಾ ಷಿಸುವ ಸಂದರ್ಭವಿದೆ. ಇದೆಲ್ಲ ನಾಟಕ ಬರಿ ಭ್ರಮೆ ಎಂದು ಸೂಚಿಸುತ್ತವೆ.

ಅಮೇರಿಕೆಯ **Avant garde** ನಾಟಕ ತಂಡವಾದ **The Living Theatre of America**–ನಾಟಕ ಬರಿಯ ಭ್ರಮೆಯೆಂದು ನಿರೂಪಿಸುವಲ್ಲಿ ಸಾಕಷ್ಟು ಸಫಲವಾಯಿತು. ಇಲ್ಲಿ ಪ್ರೇಕ್ಷಕರೊಡನೆ ಚರ್ಚೆ, ಗಲಭೆ, ಮುಂತಾದು ವುಗಳ ಜೋಡನೆ ಇದೆ. ಉದಾಹರಣೆಗೆ ಒಬ್ಬ ಪೋಲಿಸ್ ಪೇದೆ, ಕಾದಿರಿಸಿದ ಸ್ಥಾನದಲ್ಲಿ ತನ್ನ ವಾಹನವನ್ನು ನಿಲ್ಲಿಸದ ವ್ಯಕ್ತಿಯ ಮೇಲೆ ಕೇಸ್ ದಾಖಲು ಮಾಡುತ್ತಾನೆ. ಆಗ ಅವನು ಹೇಳುವುದು, 'ನೋಡಿ ಸ್ವಾಮಿ, ನನಗೆ ನಿಮ್ಮ ಕಷ್ಟ ಚೆನ್ನಾಗಿ ತಿಳಿದಿದೆ. ಆದರೇನು ಮಾಡಲೀ ಈ ಸಮವಸ್ತ್ರ ತೊಟ್ಟಿರುವು ದರಿಂದ ಹೀಗೆ ಮಾಡಬೇಕಾಯಿತು' ಎನ್ನುತ್ತಾನೆ. ಇಲ್ಲಿ ಸಮವಸ್ತ್ರ ನಾಟಕದ

ಕಾಸ್ಟ್ಯೂಮ್ ಆಯಿತು. ಸಮವಸ್ತ್ರವಿಲ್ಲದ ಪೇದೆಯು ಹೇಗೆ ತಾನು ಮನುಷ್ಯನೆಂದು ತೋರಿಸುತ್ತಾನೋ, ಹಾಗೇ ಸಮವಸ್ತ್ರ ಧರಿಸಿದ ನಂತರ ಬೇರೆಯ ವ್ಯಕ್ತಿಯೇ ಆಗುತ್ತಾನೆ. ಇದು ನಾಟಕದ ಭ್ರಮೆ ಮತ್ತು ಜಾಗೃತಾವಸ್ಥೆಯನ್ನು ಪ್ರಕಟಿಸುತ್ತದೆ.

**ನಾಟಕ ಹಾಗೂ ಸಮಾಜ**

ನಾಟಕವನ್ನು ಹ್ಯಾಮ್ಲೆಟ್ ಪ್ರಕೃತಿಯ ದರ್ಪಣವೆಂದು ಕರೆದಿದ್ದಾನೆ. ಆದರೆ ನಾಟಕ ಸಮಾಜದ ದರ್ಪಣವೂ ಹೌದು. ಸಮಾಜದಲ್ಲಿ ಆಗುತ್ತಿರುವ ಪ್ರತಿಯೊಂದು ವಸ್ತುವೂ ನಾಟಕದಲ್ಲಿ ನಿರೂಪಿಸಲ್ಪಡುತ್ತದೆ. ಒಂದು ನಾಟಕ ಓದಿದರೆ, ನಾಟಕಕಾರನ ಸಮಕಾಲೀನ ಜೀವನವು ವ್ಯಕ್ತಗೊಳ್ಳುತ್ತದೆ. ಷೇಕ್ಸ್‌ಪಿಯರ್‌ನ ನಾಟಕಗಳು ಇದಕ್ಕೆ ಸಾಕ್ಷ್ಯ. **'ಮರ್ಚೆಂಟ್ ಆಫ್ ವೆನೀಸ್'** ಕೇವಲ ಒಬ್ಬ ಬಡ್ಡಿದಾರನ ಕತೆಯಲ್ಲ, ಅದು ಅಲ್ಪಸಂಖ್ಯಾತರಿಗಾಗುವ ಉಪಟಳವನ್ನು ತಿಳಿಸುತ್ತದೆ. ಶೈಲಾಕ್ ಒಬ್ಬ ಕೆಟ್ಟ ಬಡ್ಡೀವ್ಯಾಪಾರಿಯೇನಲ್ಲ, ಅವನಿಗೆ ಸಮಾಜ ಕೊಡುತ್ತಿದ್ದ ತೊಂದರೆ, ಅವನನ್ನು ಯೆಹೂದಿ ಎಂದು ಕಡೆಗಣಿಸುತ್ತಿದ್ದ ಬಹು ಸಂಖ್ಯಾತ ಕ್ರಿಶ್ಚಿಯನರ ಉಪಟಳಗಳಿಗೆ ಪ್ರತಿಕ್ರಿಯೆ ಕೊಡುತ್ತಾನೆ. ಸಮಕಾಲೀನ ಸಮಾಜದ ಅನ್ಯಾಯಗಳ ಚಿತ್ರವನ್ನೂ ನಾಟಕ ಬರೆಯುತ್ತದೆ. **ಡಾಲ್ಸಂಕೌನ್**, ಸ್ತ್ರೀಯು ಒಂದು ಬೊಂಬೆಯಷ್ಟೇ ಅಲ್ಲ ಎಂದು ಪ್ರತಿಪಾದಿಸಿದರೆ, **ಗೋಸ್ಟ್**, ಗಂಡಸರಲ್ಲಿರುವ ಕೀಳು ನೀತಿಯನ್ನು ಖಂಡಿಸುತ್ತದೆ. ಹೀಗೆಯೇ **ಹೆಡ್ಡ ಗೀಬ್ಬರ್** ಷಾ ಸೂಳೆಗಾರಿಕೆ, ಸ್ಲಮ್ಸ್ ಹಾಗೂ ಸಮಾಜದ ಅನಿಷ್ಟಗಳನ್ನು ಚಿತ್ರಿಸಿದರೆ ಗಾಲ್ಸ್‌ವರ್ದಿ ಮೇಲ್ವರ್ಗದವರಿಂದ ಕೆಳವರ್ಗದ ಜನರ ಶೋಷಣೆಯನ್ನು ಚಿತ್ರಿಸುತ್ತಾನೆ. ತಮಗೆ ಗೆಲುವುಂಟಾಗಲಿ ಎಂದು ಪಟ್ಟಭದ್ರರು ಮಾಡುವ ನ್ಯಾಯದ ನಯವಂಚನೆಯನ್ನು ಷಾನ **ಸೆಂಟ್ ಜೋನ್** ತೋರಿಸುತ್ತದೆ. ವಿಜ್ಞಾನ ಹಾಗೂ ಧಾರ್ಮಿಕ ನೆಲೆಗಳ ನಡುವಿನ ತಿಕ್ಕಾಟ **ಗೆಲಿಲಿಯೊ** ದ ಉದ್ದೇಶವಾದರೆ, ನಿಷ್ಪ್ರಯೋಜಕ ಯುದ್ಧದ ಬವಣೆಗಳನ್ನು **ಮದರ್ ಕರೇಜ್** ತೋರಿಸುತ್ತದೆ.

ನಾಟಕ ಬರೀ ಭ್ರಮೆಯಷ್ಟೇ ಅಲ್ಲ, ಅದರಲ್ಲಿ ಸತ್ಯದ ಕೆಲವಂಶಗಳೂ ಕೂಡಿವೆ. ಮ್ಯಾಕ್ಬೆತ್ ಡಂಕನ್‌ನನ್ನು ಕೊಂದು ಗದ್ದುಗೆಯೇರಿದರೆ, ಮತ್ತೊಬ್ಬ ಮ್ಯಾಕ್ಬೆತನನ್ನು ಕೊಂದು ರಾಜನೆನಿಸಿಕೊಳ್ಳುತ್ತಾನೆ. ಹೀಗೆ ಒಬ್ಬನ ಅವಸಾನ ಇನ್ನೊಬ್ಬನ ಯಶಸ್ಸು, ಇದು ಇಲ್ಲಿನ ಸತ್ಯ ಸಂಗತಿ. ಹೆತ್ತ ತಾಯಿ ತನ್ನ ಮಗುವನ್ನು 'ಚಾಕ್' ವೃತ್ತದಿಂದ ಹೊರಗೆಳೆಯುತ್ತಾಳೆ. ಅವಳು ಹೆಸರಿಗೆ

ಮಾತ್ರ ತಾಯಿಯಷ್ಟೇ. ಮಗುವಿನ ಬಗ್ಗೆ, ಪ್ರೀತಿ, ಕಳಕಳಿಯಿಲ್ಲದ ಅವಳನ್ನು ಅಜ್ದಾಕ್ ತಾಯಿಯೆಂದು ಪರಿಗಣಿಸುವುದಿಲ್ಲ. ತನ್ನ ಜೀವದ ಹಂಗು ತೊರೆದು ಕಾಪಾಡಿದ ದಾದಿಯೇ ತಾಯಿಯಾಗುತ್ತಾಳೆ. ಮಾನವನ ಅರ್ಥಹೀನ ಬದುಕನ್ನು **ಗಾಡೊ** ಪ್ರತಿಬಿಂಬಿಸುತ್ತದೆ. ಪಿಂಟರನ **ಹೋಂ ಕಮಿಂಗ್** ಸಮಾಜದಲ್ಲಿ ನಡೆಯುವ ಸೂಳೆಗಾರಿಕೆ, ಮೋಸ, ಕಪಟಗಳ ಒಂದು ನೈಜ ಚಿತ್ರಣ.

ನಾಟಕದ ಗುಣಗಳು ವೈವಿಧ್ಯಮಯ ; ಇದು ಜೀವನದ ಅನುಕರಣೆಯಷ್ಟೇ ಅಲ್ಲದೆ, ಭಿನ್ನರುಚಿಯ ಜನರಿಗೆ ವಿಭಿನ್ನ ಸಂತೋಷಗಳನ್ನು ನೀಡುವ ಸಾಕಾರ. ನಾಟಕ ಬರಿಯ ಭ್ರಮೆಯೆನಿಸಿದರೂ ಫ್ರಾಸ್‌ಫರೋನ ಮಾತಿನಂತೆ ಕನಸು ಕಂಡು ಮುಗಿದು ಹೋಗುವ ಜೀವನ ಇದರ ಒಂದು ಅಂಶ.

(ಆಧಾರಿತ)

ಅವಲೋಕನ

# ಸರ್ ಸಿದ್ದಪ್ಪ ಕಂಬಳಿಯವರ ಕಾಲ ಮತ್ತು ವ್ಯಕ್ತಿತ್ವ

ಐ. ಆರ್. ಪ್ರಮೋದ್

"ಸರ್ ಸಿದ್ದಪ್ಪ ಕಂಬಳಿ ಅವರು ವೀರಶೈವ ಪುಣ್ಯ ಪುರುಷರಲ್ಲಿ ಗಣ್ಯ ಪುರುಷರು. ಆಧುನಿಕ ವೀರಶೈವ ಸಮಾಜದ ದಿಕ್ಕನ್ನೇ ಬದಲಿಸಿ ಅದರ ಹಣೆಯ ಬರಹವನ್ನು ಬರೆಯುವುದರ ಮೂಲಕ ಅದ್ಭುತ ಇತಿಹಾಸವನ್ನು ನಿರ್ಮಿಸಿದ ಕೀರ್ತಿ ಇವರದಾಗಿದೆ" (ಪುಟ 4) ಎನ್ನುವ ಪ್ರಕಾಶಕರ ಮಾತು ಕಂಬಳಿಯವರ ವ್ಯಕ್ತಿತ್ವದ ಒಂದು ಭಾಗವನ್ನು ಮಾತ್ರ ಗುರುತಿಸುತ್ತದೆ. ಯಾಕೆಂದರೆ ಸಿದ್ದಪ್ಪ ಕಂಬಳಿಯವರನ್ನು ವೀರಶೈವ ಜನಾಂಗದ ಮುಖಂಡ ಎನ್ನುವುದಕ್ಕಿಂತ, ಆ ಕಾಲದ ಸಮಗ್ರ ಹಿಂದುಳಿದ ವರ್ಗಗಳ ನಾಯಕನ ಪಾತ್ರ ಅವರದಾಗಿತ್ತೆಂದು ಲೇಖಕರು ಈ ಪುಸ್ತಕದಲ್ಲಿ ಹೇಳುತ್ತಾರೆ:

"ಬ್ರಾಹ್ಮಣೇತರರೆಲ್ಲರೂ ಸಿದ್ದಪ್ಪನವರ ಕಡೆಗೆ ಅಭಿಮಾನದಿಂದ ನೋಡುತ್ತಿದ್ದರು. ಕೆಳಗೆ ಬಿದ್ದವರೆಂದು, ಹಿಂದುಳಿದವರೆಂದು ಸಮಾಜದಲ್ಲಿ ನಿಸ್ಪೃಷ್ಟರೆನಿಸಿದ ಜನರಿಗೆಲ್ಲ ಅವರು ರಕ್ಷಾ ಕವಚವೆನಿಸಿದರು. ಲಿಂಗಾಯಿತ, ಮುಸಲ್ಮಾನ, ಮರಾಠ, ರೆಡ್ಡಿ, ಹರಿಜನ, ಪಟ್ಟೇಗಾರ ಎನ್ನುವ ಭೇದಭಾವ ಎಣಿಸದೆ ಎಲ್ಲ ಜನರೂ ಅವರನ್ನು ತಮ್ಮ ಮುಂದಾಳೆಂದು ಪರಿಗಣಿಸಿದ್ದರು". (ಪುಟ 27)

ಅಲ್ಲದೆ ಪಾಟೀಲ ಪುಟ್ಟಪ್ಪನವರು ಸಿದ್ದಪ್ಪ ಕಂಬಳಿಯವರನ್ನು ಹಿಂದುಳಿದ ವರ್ಗಗಳ ರಕ್ಷಕರೆಂದೂ, ಬ್ರಾಹ್ಮಣೇತರ ಚಳುವಳಿಯ ನಾಯಕರೆಂದೂ ವರ್ಣಿಸುತ್ತಾರೆ. 1930ರ ದಶಕದಲ್ಲಿ—

---

ಸರ್ ಸಾಹೇಬರು : ಲೇಖಕರು : ಪಾಟೀಲ ಪುಟ್ಟಪ್ಪ
ಪ್ರ: ವೀರಶೈವ ಅಧ್ಯಯನ ಸಂಸ್ಥೆ—ಗದಗ

"ಕಂಬಳಿಯವರು ಆ ಕಾಲದ ಮುಂಬಯಿ ರಾಜ್ಯದಲ್ಲಿ ಭಾರಿ ಮಹತ್ವದ ವ್ಯಕ್ತಿ ಎನಿಸಿದ್ದರು. ಅವರು ಮುಂಬಯಿ ವಿಧಾನಪರಿಷತ್ತಿನಲ್ಲಿ ಇಪ್ಪತ್ತೇಳು ಜನ ಬ್ರಾಹ್ಮಣೇತರ ಗುಂಪಿನ ನಾಯಕರಾಗಿದ್ದರು." (ಪುಟ 45)

ಈ ಹಿನ್ನೆಲೆಯಲ್ಲಿ ಉತ್ತರ ಕರ್ನಾಟಕದ ಬ್ರಾಹ್ಮಣೇತರ ಚಳುವಳಿಯ ಪ್ರಮುಖ ವಕ್ತಾರರಾಗಿದ್ದ ಸಿದ್ದಪ್ಪ ಕಂಬಳಿಯವರ ಕಾಲ ಮತ್ತು ವ್ಯಕ್ತಿತ್ವ ಮಹತ್ವಪೂರ್ಣವಾದದ್ದು. ಈ ಬ್ರಾಹ್ಮಣೇತರ ಚಳುವಳಿಯಲ್ಲಿ ಯಾವ್ಯಾವ ವರ್ಗಗಳು ಯಾವ ರೀತಿಯಲ್ಲಿ ಪಾಲುಗೊಂಡಿದ್ದವು ಮತ್ತು ಈ ಚಳುವಳಿ ಯಾವ ವರ್ಗಗಳ ಒತ್ತಾಸೆಯನ್ನು ಪ್ರತಿನಿಧಿಸಿತ್ತು ಎನ್ನುವ ಪರಿಶೀಲನೆ ಕೂಡ ಮುಖ್ಯ. ಯಾಕೆಂದರೆ ಬ್ರಾಹ್ಮಣೇತರ ಚಳುವಳಿ ತನ್ನಿಂದ ತಾನೇ ಪ್ರಗತಿಶೀಲ ವಾಗಬೇಕೆಂದಿಲ್ಲ. ಆರಂಭದಲ್ಲಿ ಪ್ರಗತಿಶೀಲವಾದದ್ದು ಮುಂದಿನ ಹಂತಗಳಲ್ಲಿ ತಟಸ್ಥವಾಗಿ ಪ್ರಗತಿ ವಿರೋಧಿಯಾಗಬಹುದು. ಮಹಾರಾಷ್ಟ್ರದಲ್ಲಿ ಸುರುವಾದ ಬ್ರಾಹ್ಮಣೇತರ ಚಳುವಳಿ ಮೊದಲಲ್ಲಿ ಪ್ರಗತಿಶೀಲವಾಗಿತ್ತು. ಹಿಂದೂ ಧರ್ಮದ ಬ್ರಾಹ್ಮಣ ಪ್ರಭುತ್ವದ ಜಾತೀಯ ವಿಷಮತೆ ಮತ್ತು ಕ್ರೌರ್ಯದ ವಿರುದ್ಧ ಸಾಮಾಜಿಕ ನ್ಯಾಯ ಮತ್ತು ಸಮಾನತೆಗಾಗಿ ಆರಂಭವಾದ ಸತ್ಯಶೋಧಕ ಚಳುವಳಿ ಆಮೇಲೆ ಬ್ರಾಹ್ಮಣ ವಿರೋಧಿ ಚಳುವಳಿಯಾಗಿ ರೂಪುಗೊಂಡಿತು. ಹಿಂದೂ ಧರ್ಮದ ಶ್ರೇಣಿಕೃತ ಜಾತಿ ವ್ಯವಸ್ಥೆಯ ವಿರುದ್ಧ ಉಗ್ರ ಆಂದೋಲನ ವಾಗಿ ಪ್ರಾರಂಭವಾದದ್ದು, ಆಮೇಲೆ ಪಾಳೆಯಗಾರಿ ಪ್ರಭುಗಳು, ಕೊಲ್ಲಾಪುರ ಮಹಾರಾಜರು ನಾಯಕತ್ವ ವಹಿಸುವಂತಾಯಿತು. ಜ್ಯೋತಿಬಾಫುಲೆ ನಿಧನ ವಾಗಿ ಹತ್ತು ವರ್ಷದ ನಂತರ 1896ರಲ್ಲಿ ಈ ಹೊಸ ನಾಯಕತ್ವ ಮರಾಠರನ್ನು ಕ್ಷತ್ರಿಯರನ್ನಾಗಿ ಪರಿಗಣಿಸಲು ವೇದೋಕ್ತ ಹಕ್ಕುಗಳನ್ನು ಪ್ರತಿಪಾದಿಸಿತು. ಆ ಬಳಿಕದ ವರ್ಷಗಳಲ್ಲಿ ಬ್ರಿಟಿಷರೊಂದಿಗೆ ರಾಜಿ ಮಾಡಿಕೊಂಡು ರಿಯಾಯ್ತಿಗಳನ್ನು ಆಗ್ರಹ ಪಡಿಸುವ ಚಳುವಳಿಯಾಗಿ ಮಾರ್ಪಾಡಾಯಿತು. ಜಲಿಯನ್‌ವಾಲಾಬಾಗ್ ಹತ್ಯಾಕಾಂಡದಿಂದ ಕ್ರೋಧಗೊಂಡು ಉರಿಯುತ್ತಿದ್ದ ಮುಂಬಯಿಯ ಕಾರ್ಮಿಕರು ವೇಲ್ಸ್‌ನ ರಾಜಕುಮಾರನ ವಿರುದ್ಧ ಪ್ರತಿಭಟನಾ ಪ್ರದರ್ಶನಗಳನ್ನು ನಡೆಸಿದ ಸಂದರ್ಭದಲ್ಲಿ ಕೊಲ್ಲಾಪುರ ಮಹಾರಾಜ ಪೂನಾದಲ್ಲಿ ರೈತರನ್ನು ಸೇರಿಸಿ ವೇಲ್ಸ್ ರಾಜಕುಮಾರನನ್ನು ಸ್ವಾಗತಿಸಿದ್ದಷ್ಟೆ ಅಲ್ಲ, ರಾಜಕುಮಾರನಿಂದ ಶಿವಾಜಿ ಸ್ಮಾರಕಕ್ಕೆ ಅಡಿಪಾಯ ಹಾಕಿಸಿ ಗೌರವ ಸಲ್ಲಿಸಿದ. (ಮಹಾರಾಷ್ಟ್ರದ ಬ್ರಾಹ್ಮಣೇತರ ಚಳುವಳಿಯ ವಸ್ತುನಿಷ್ಠ ವಿಶ್ಲೇಷಣೆಗೆ ನೋಡಿ : ಬಿ. ಟಿ. ರಣದೀವೆಯವರ -Caste, Class and property relations) ಸರ್ ಸಿದ್ದಪ್ಪ ಕಂಬಳಿ ಯವರ ಸಾಧನೆಗಳನ್ನು ಗುರುತಿಸುವಾಗ ಅವರು ಭಾಗವಹಿಸಿದ ಬ್ರಾಹ್ಮಣೇತರ ಚಳುವಳಿ, ಜಾತಿ ವ್ಯವಸ್ಥೆಯ ಬೆನ್ನೆಲುಬಾಗಿದ್ದ ಊಳಿಗಮಾನ್ಯ ಭೂ ಒಡೆತನದ

ವಿರುದ್ಧ, ಈ ದೇಶದ ಎಲ್ಲ ಹಿಂದುಳಿದ ಜಾತಿ ವರ್ಗಗಳನ್ನು ಕ್ರೂರ ಶೋಷಣೆಗೊಳಪಡಿಸಿದ್ದ ಬ್ರಿಟಿಷ್ ಸಾಮ್ರಾಜ್ಯದ ಶಾಹಿಯ ವಿರುದ್ಧ ಯಾವ ರೀತಿಯ ಹೋರಾಟವನ್ನು ನಡೆಸಿತ್ತು ಎನ್ನುವ ವಿವರಗಳು ಮುಖ್ಯವಾಗಿವೆ.

"ಮೈಸೂರು ಸಂಸ್ಥಾನವು ಅಚ್ಚ ಕನ್ನಡ ದೊರೆಗಳ ಆಳ್ವಿಕೆಗೆ ಒಳಪಟ್ಟಿದ್ದರೂ, ಹೊರಗಿನ ಅಧಿಕಾರಿಗಳ ಕಾರಣದಿಂದ ಅಲ್ಲಿ ಕೆಲಮಟ್ಟಿಗೆ ತೆಲುಗು ಹಾಗೂ ತಮಿಳುಗಳ ಪ್ರಾಬಲ್ಯ ಕಾಣಿಸಿಕೊಂಡಿತ್ತು. ಅದಕ್ಕೂ ಹೆಚ್ಚಾಗಿ ನೌಕರಿಗಳಲ್ಲಿ ಬಹು ಸಂಖ್ಯಾತ ಜನರು ಇಲ್ಲವೇನೊ ಎನ್ನುವಂತೆ ಅತ್ಯಂತ ಕಡಿಮೆ ಸಂಖ್ಯೆಯಲ್ಲಿದ್ದರು. ಆ ಸಂಸ್ಥಾನದಲ್ಲಿ ಆಗ ಎಂ. ಬಸವಯ್ಯನವರು ಹಾಗೂ ಕೆ. ಎಚ್. ರಾಮಯ್ಯನವರು ಬ್ರಾಹ್ಮಣೇತರ ಜನರಿಗೆ ವಿದ್ಯೆಯ ಹಾಗೂ ನೌಕರಿಗಳ ಅವಕಾಶ ಸಿಕ್ಕಬೇಕೆಂದು ನಿಖರವಾದ ಪ್ರಯತ್ನ ನಡೆಸಿದ್ದರು. ಅವರ ಪ್ರಯತ್ನಗಳಿಗೆ ಶ್ರೀಮದ್ಯುವರಾಜ ನರಸಿಂಹರಾಜ ಒಡೆಯರರು ಬೆಂಬಲವಾಗಿ ನಿಂತು ಬಹು ದೊಡ್ಡ ಪುಷ್ಟಿಯನ್ನು ಒದಗಿಸಿದೊಬ್ಬರು." (ಪುಟ 38)

ಹುಬ್ಬಳ್ಳಿಯಲ್ಲಿ ಸಿದ್ದಪ್ಪನವರು ಬ್ರಾಹ್ಮಣೇತರ ಪರಿಷತ್ತನ್ನು ಸಂಘಟಿಸಿದರು. "ಆ ಪರಿಷತ್ತಿಗೆ ಮದ್ರಾಸಿನ ಸರ್. ಪಿ. ತ್ಯಾಗರಾಜ ಚೆಟ್ಟಿಯವರು ಅಧ್ಯಕ್ಷರೆಂದು ಕೊಲ್ಲಾಪುರದ ಶಾಹು ಮಹಾರಾಜರು ಉದ್ಘಾಟಕರೆಂದೂ ನಿಯೋಜಿತರಾಗಿದ್ದರು. ಬಹು ಸಂಖ್ಯಾತ ಸಮಾಜದ ಸಂಘಟನೆ ಹೊಸ ಉತ್ಸಾಹವನ್ನು ಮೂಡಿಸಿತು. ಆ ಜನರಿಗೆ ತಮ್ಮ ಅರಿವನ್ನು ತಂದುಕೊಟ್ಟಿತು" (ಪುಟ 40) ಸಿದ್ದಪ್ಪ ಕಂಬಳಿಯವರು ಶಾಹು ಮಹಾರಾಜರ ಸ್ನೇಹಿತರಾಗಿದ್ದರು. "ಶಾಹು ಮಹಾರಾಜರ ದಯಾರ್ದ್ರ ಹೃದಯುವನ್ನು ವಿಶಾಲ ಮನೋಭಾವನೆಯನ್ನು ಕಂಡು ಕಂಬಳಿಯವರಿಗೆ ಅವರ ಬಗೆಗೆ ಹೆಚ್ಚಿನ ಗೌರವ ಮೂಡಿಕೊಂಡಿತು. ಹಿಂದುಳಿದ ವರ್ಗಗಳ ಎಲ್ಲ ಜನರ ಕಲ್ಯಾಣಕ್ಕೋಸ್ಕರ ಅವರು ತಮ್ಮ ಖಜಾನೆಯನ್ನೇ ತೆರೆದಿರಿಸಿರುವರೆನ್ನುವ ಸಂಗತಿಯನ್ನು ಕಂಡು ಕೇಳಿ ಅವರಿಗೆ ಮಹಾರಾಜರ ಬಗೆಗೆ ಭಾರಿ ಹೆಮ್ಮೆ ಎನಿಸಿದ್ದಿತು. ಆ ಮಹಾರಾಜರ ಮೂಲಕವೇ ಕಂಬಳಿಯವರಿಗೆ ಬಾಬಾ ಸಾಹೇಬರ ಪರಿಚಯವಾಯಿತು" (ಪುಟ 82)

ಶ್ರೀಮದ್ಯುವರಾಜ ನರಸಿಂಹರಾಜ ಒಡೆಯರು ಮತ್ತು ಕೊಲ್ಲಾಪುರದ ಶಾಹು ಮಹಾರಾಜರ ಬೆಂಬಲದಲ್ಲಿ ನಡೆದ ಸಿದ್ದಪ್ಪ ಕಂಬಳಿಯವರು ಭಾಗವಹಿಸಿದ ಬ್ರಾಹ್ಮಣೇತರ ಚಳುವಳಿ ಯಾವ ವರ್ಗಗಳ ಹಿತಾಸಕ್ತಿಯನ್ನು ಪ್ರತಿನಿಧಿಸಿತು ಎನ್ನುವುದು ಸ್ಪಷ್ಟವಾಗುತ್ತದೆ. ನೌಕರಿಗಳಲ್ಲಿ ಆದ್ಯತೆ ಆವತ್ತಿನ ಸಂದರ್ಭದಲ್ಲಿ ಯಾಕೆ ಮತ್ತು ಹೇಗೆ ಪ್ರಗತಿಶೀಲವಾಗಿತ್ತು ಎನ್ನುವ ಬಗ್ಗೆ ಪುಸ್ತಕದಲ್ಲಿ ವಿವರಗಳಿಲ್ಲ.

ಆದರೆ ಕಂಬಳಿಯವರ ಹಿಂದುಳಿದ ವರ್ಗಗಳ ಮೇಲಿನ ಕಾಳಜಿ ನೌಕರಿಗಳಲ್ಲಿ ಆದ್ಯತೆಯನ್ನು ಆಗ್ರಹ ಪಡಿಸುವುದರಲ್ಲಿ ಮಿಶಿಗೊಂಡಿತ್ತು ಎನ್ನುವುದು ಗಮನಾರ್ಹ. ಅವರು ಮುಂದೆ ಮುಂಬಯಿ ಸಂಸ್ಥಾನದಲ್ಲಿ ಶಿಕ್ಷಣ ಮಂತ್ರಿಗಳಾದಾಗ "ಹೊಸ ನೇಮಕಗಳ ಪ್ರಶ್ನೆ ಬಂದಾಗ ಹಳೆಯ ಇಲಾಖೆಗಳಲ್ಲಿ ಜನ ವರ್ಗಗಳ ಸಮತೋಲನ ಕಾಯ್ದುಕೊಳ್ಳುವುದಕ್ಕಾಗಿ, ಬ್ರಾಹ್ಮಣೇತರರಿಗೆ ಹೆಚ್ಚಿನ ಆದ್ಯತೆ ನೀಡಬೇಕೆನ್ನುವ ಕಂಬಳಿಯವರ ಸೂಚನೆಯನ್ನು ಸರ್ಕಾರ ಒಪ್ಪಿಕೊಂಡಿತು" (ಪುಟ 65).

ಹಿಂದುಳಿದ ಜಾತಿ ವರ್ಗಗಳನ್ನು ದಾರಿದ್ರ್ಯ ಮತ್ತು ಅಜ್ಞಾನದ ನರಕದಲ್ಲಿಟ್ಟಿದ್ದ ಜಾತಿ ವ್ಯವಸ್ಥೆಯನ್ನು ಪೋಷಿಸುವ ಊಳಿಗಮಾನ್ಯ, ಭೂಒಡೆತನದ ವ್ಯವಸ್ಥೆಯ ವಿರುದ್ಧ ಸಿದ್ದಪ್ಪ ಕಂಬಳಿಯವರು ಹೋರಾಟವನ್ನಾಗಲೀ, ಚಳುವಳಿಯನ್ನಾಗಲೀ ನಡೆಸಲಿಲ್ಲ. ಹಾಗೆ ನಡೆಸಿದ್ದರೆ ಅವರಿಗೆ ಕೊಲ್ಲಾಪುರ ಮಹಾರಾಜರ ಸ್ನೇಹವೂ, ಬ್ರಿಟಿಷ್ ಪ್ರಭುತ್ವದಲ್ಲಿ ಮುಂಬಯಿ ಸಂಸ್ಥಾನದ ಶಿಕ್ಷಣ ಮಂತ್ರಿ ಸ್ಥಾನವೂ ಸರ್ ಪದವಿಯೂ ಲಭ್ಯವಾಗುತ್ತಿರಲಿಲ್ಲ.

ಪುಟ 89ರಲ್ಲಿ ಹೇಳಲಾದ ಕಂಬಳಿಯವರ ರೈತರ ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ವಿವರಗಳಿಲ್ಲ. ಬಡ ರೈತರ ಪರಿಸ್ಥಿತಿ ನಿವಾರಿಸಬೇಕೆನ್ನುವ ಅವರ ಆಶಯವೂ ಕಾನೂನಿನ ಚೌಕಟ್ಟಿಗೆ ಸೀಮಿತವಾಗಿತ್ತು ಎನ್ನುವುದು ಗಮನಾರ್ಹ.

ಸರ್ ಸಿದ್ದಪ್ಪ ಕಂಬಳಿಯವರು ಅಧಿಕಾರದ ಗಾದಿಯನ್ನು ಹಂತ ಹಂತವಾಗಿ ಏರಿದರು. ಆದರೆ ಅವರದು ಹೋರಾಟದ ಹಾದಿಯಾಗಿರಲಿಲ್ಲ. ಬ್ರಿಟಿಷ್ ಸಾಮ್ರಾಜ್ಯ ಶಾಹಿಯನ್ನು ನೇರವಾಗಿ ವಿರೋಧಿಸದ ಸಿದ್ದಪ್ಪ ಕಂಬಳಿಯವರಿಗೆ ಸರ್ ಪದವಿ ಲಭ್ಯವಾದದ್ದು ಆಕಸ್ಮಿಕವಲ್ಲ. "ಬ್ರಿಟಿಷರು ಕೊಟ್ಟ ಬಹುಮಾನವೆಂದು ಅವರ ಬಗೆಗೆ ಮೂಗು ಮುರಿಯುವವರೂ ಇದ್ದಾರೆ. ಆದರೆ ಬ್ರಿಟಿಷರು ಆ ಪದವಿಗಳನ್ನು ಬೀದಿಯಲ್ಲಿ ಬಿದ್ದವರ ಮೇಲೆ ಸುರಿಯಲಿಲ್ಲ. ವಿಶ್ವಾಸಪಡುವಂತಹ ನಾಯಕ ಗುಣಗಳನ್ನು ಪ್ರದರ್ಶಿಸಿ ಜನರನ್ನು ಮುನ್ನಡೆಸಿಕೊಂಡು ಹೋದ ಮೀಸಲು ಜನರನ್ನೇ ಅವರು ಈ ಬಹುಮಾನಕ್ಕೆ ಆಯ್ಕೆ ಮಾಡಿದರು. ವ್ಯಕ್ತಿ ದೃಷ್ಟಿಯಿಂದ ಕಂಬಳಿಯವರದು ಬಹು ದೊಡ್ಡ ಸಾಧನೆ. ಅವರು ತಮಗೆ ವೈಭವ ತಂದುಕೊಂಡು ಆ ವೈಭವದ ಕಿರೀಟವನ್ನು ತಮ್ಮ ಸಮಾಜದ ಹಾಗೂ ಕರ್ನಾಟಕದ ತಲೆಯ ಮೇಲೆ ಇರಿಸಿದರು" (ಪುಟ 103) ಎನ್ನುವ ಪಾಟೀಲ ಪುಟ್ಟಪ್ಪನವರ ಮಾತುಗಳು ಸತ್ಯಕ್ಕೆ ದೂರವಾದ ಹೊಗಳಿಕೆಯ ಅತಿರೇಕಗಳು. ಯಾರು "ವಿಶ್ವಾಸಪಡುವಂತಹ ನಾಯಕ ಗುಣವನ್ನು" ಕಂಬಳಿಯವರು

ಹೊಂದಿದ್ದರು ಎನ್ನುವುದನ್ನು ವಿವರಿಸದೆ ಕರ್ನಾಟಕದ ತಲೆಯ ಮೇಲೆ ವೈಭವದ ಕಿರೀಟವನ್ನು ಇರಿಸಿದರು ಎನ್ನುವುದು ಜವಾಬ್ದಾರಿ ಹೇಳಿಕೆಯಲ್ಲ.

**ಕಂಬಳಿ ಸಿದ್ಧಪ್ಪನವರು ಮತ್ತು ಕಾಂಗ್ರೆಸ್** : ಕಾಂಗ್ರೆಸ್ಸಿನ ವಿರೋಧಿಯಾಗಿದ್ದ ಕಂಬಳಿಯವರ ನಿಲುವುಗಳು ಯಾವ ನೆಲೆಯಲ್ಲಿ ರೂಪುಗೊಂಡಿದ್ದವು ಎನ್ನುವ ಸುಳಿವು ಪುಸ್ತಕದಲ್ಲಿ ಸಿಗುತ್ತದೆ.

"ಬ್ರಿಟಿಷರ ವಿರುದ್ಧ ಆಂಧೋಲನ ಹೂಡಿ ಅಸಹಕಾರದ ಮೂಲಕ ದೇಶಕ್ಕೆ ಸವಲತ್ತು ವಿಧಿಸಬೇಕೆಂದು ಗಾಂಧೀಜಿ ಬಯಸಿದ್ದರೆ, ಬ್ರಿಟಿಷ್‌ರೊಂದಿಗೆ ಸಹಕರಿಸಿ ಹಿಂದುಳಿದ ವರ್ಗಗಳ ಜನರಿಗೋಸುಗ ಸವಲತ್ತು ಪಡೆಯಬೇಕೆಂದು ಕಂಬಳಿ ಬಯಸಿಧ್ದರು" (ಪುಟ 6)

ಕಂಬಳಿ ಸಿದ್ದಪ್ಪನವರು ಕಾಂಗ್ರೆಸ್ ವಿರೋಧಿಯಾಗಿಯೇ ಮುಂದುವರಿದರು. 1937ರಲ್ಲಿ ಸರದಾರ್ ಪಟೇಲರ ಸತತ ಪ್ರಯತ್ನದ ಮುಂದೆ ಮತ್ತು ವಿರೋಧವಾಗಿ ನೆಹರೂ ಸ್ವತಃ ಪ್ರಚಾರ ನಡೆಸಿದರೂ ಕೂಡ ಮುಂಬಯಿ ರಾಜ್ಯದಲ್ಲಿ ಧಾರವಾಡದಿಂದ ಅತ್ಯಧಿಕ ಮತಗಳಿಂದ ಗೆದ್ದರು. 1952ರ ಚುನಾವಣೆಗಳಲ್ಲಿ ಸಿದ್ದಪ್ಪನವರು ಸೋತುಹೋದರು. ಆದರೆ ಯಾಕೆ ಸೋತು ಹೋದರು ಎನ್ನುವುದನ್ನು ಲೇಖಕರು ವಿಶ್ಲೇಷಿಸಿಲ್ಲ.

1947ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದಾಗ ಮತ್ತು ಆದರ ಮೊದಲು ರಾಷ್ಟ್ರೀಯ ಚಳುವಳಿಯ ವಿವಿಧ ಮಜಲುಗಳಲ್ಲಿ ಸರ್ ಸಿದ್ದಪ್ಪ ಕಂಬಳಿಯವರು ಕಾಂಗ್ರೆಸ್ಸಿನ ಬಗ್ಗೆ ಯಾವ ನಿಲುವನ್ನು ತಳೆದಿದ್ದರು ಎನ್ನುವ ಬಗ್ಗೆ ಖಚಿತ ವಿವರಗಳಿಲ್ಲ. ಆದರೆ ಅವರ ಕಾಂಗ್ರೆಸ್ ವಿರೋಧಿ ನಿಲುವು ಪ್ರಜಾಪ್ರಭುತ್ವವಾದಿ ಅಥವ ಎಡಪಂಥೀಯ ನೆಲೆಯಿಂದ ಬಂದದ್ದಲ್ಲ ಎನ್ನುವ ಮಾಹಿತಿ ಈ ಪುಸ್ತಕದಲ್ಲಿ ಸಿಗುತ್ತದೆ.

ಬ್ರಿಟಿಷ್ ಸಾಮ್ರಾಜ್ಯ ಶಾಹಿಯ ಬರ್ಬರ ಕ್ರೌರ್ಯ, ದಬ್ಬಾಳಿಕೆಯ ವಿರುದ್ಧ ಜನತೆಯ ಹೋರಾಟಗಳೂ, ಆಂಧೋಲನಗಳೂ ನಡೆದ ಕಾಲದಲ್ಲಿ ಬದುಕಿದ ಸರ್ ಸಿದ್ದಪ್ಪ ಕಂಬಳಿಯವರು ಬ್ರಿಟಿಷರ ವಿರುದ್ಧ ಹೋರಾಡಿದರೆನ್ನುವುದಕ್ಕೆ ಈ ಪುಸ್ತಕದಲ್ಲಿ ಪುರಾವೆಗಳಿಲ್ಲ. ಬದಲು ಅವರು ಬ್ರಿಟಿಷ್ ಆಳ್ವಿಕೆಯಲ್ಲಿ ಶಾಸನ ಸಭೆಯನ್ನು ಪ್ರವೇಶಿಸಿ ಮಂತ್ರಿ ಸ್ಥಾನವನ್ನು ಪಡೆದರು. "ಮುಂಬಯಿ ಸರ್ಕಾರದಲ್ಲಿ ಕಂಬಳಿಯವರು ಅನೇಕ ಮಹತ್ವದ ಶಾಖೆಗಳನ್ನು ನಿರ್ವಹಿಸಿದ್ದರು.

ಕೃಷಿ, ಅರಣ್ಯ, ಸಹಕಾರ, ಶಿಕ್ಷಣ, ಕಾನೂನು, ಅಬಕಾರಿ ಹಾಗೂ ಪಾರ್ಲಿಮೆಂಟರಿ ಶಾಖೆಗಳು ಅವರ ಕಡೆಗೆ ಇದ್ದವು" (ಪುಟ 60)

ಹೀಗೆ ಬ್ರಿಟಿಷ್ ಪ್ರಭುತ್ವದೊಂದಿಗೆ ನೌಕರಿಯಲ್ಲಿ ಆದ್ಯತೆ ಮತ್ತು ಇನ್ನಿತರ ರಿಯಾಯಿತಿಗಳನ್ನು ಚೌಕಾಶಿ ಮಾಡಿದ, ಮಂತ್ರಿ ಸ್ಥಾನವನ್ನು ಪಡೆದು ಮೇಲ್ಮಟ್ಟ ಸುಧಾರಣೆಗಳನ್ನು ಮಾಡಿದ ಸರ್ ಸಿದ್ದಪ್ಪ ಕಂಬಳಿಯವರ ರಾಜಕೀಯ ಆ ಕಾಲದ ಕಾಂಗ್ರೆಸ್ಸಿನ ರಾಷ್ಟ್ರೀಯ ಬೂರ್ಜ್ವಾ ನಾಯಕತ್ವದ ರಾಜಕೀಯಕ್ಕಿಂತ ಹೇಗೆ ಭಿನ್ನವಾಗಿತ್ತೆಂಬ ಮುಖ್ಯವಾದ ಅಭ್ಯಾಸ ಈ ಪುಸ್ತಕದಲ್ಲಿಲ್ಲ. ಹಿಂದುಳಿದ ಜಾತಿ ವರ್ಗಗಳ ನ್ಯಾಯಸಮ್ಮತ ಭೂಮಿಯ ಒಡೆತನದ ಪ್ರಶ್ನೆಯ ಬಗ್ಗೆ, ಊಳಿಗ ಮಾನ್ಯ ಭೂಒಡೆತನದ ನಿರ್ಮೂಲನದ ಬಗ್ಗೆ ಮೌನವಾಗಿದ್ದ ಕಂಬಳಿಯವರ ರಾಜಕೀಯ ಮತ್ತು ಚಟುವಟಿಕೆಗಳಿಂದ ಆ ಜಾತಿ ವರ್ಗಗಳ ಮೂಲಭೂತ ಬದಲಾವಣೆ ಸಾಧ್ಯವಿರಲಿಲ್ಲ. ಸಿದ್ದಪ್ಪ ಕಂಬಳಿಯವರನ್ನು ಏಕಾಏಕಿ ಹಿಂದುಳಿದ ವರ್ಗಗಳ ನೇತಾರ ಎಂದೆಲ್ಲ ವರ್ಣಿಸುವುದರಲ್ಲಿ ವಾಸ್ತವ್ಯಕ್ಕಿಂತ ಹೊಗಳಿಕೆಯ ಅಂಶವೇ ಜಾಸ್ತಿಯಾಗಿದೆ. 1926ರಲ್ಲಿ ಕಂಬಳಿಯವರು ವೀರಶೈವ ಮಹಾ ಸಭೆಯ ಬೆಂಗಳೂರು ಅಧಿವೇಶನಕ್ಕೆ ಅಧ್ಯಕ್ಷರಾಗಿ ಆಯ್ಕೆಯಾದರು. ಅಲ್ಲದೆ ಈ ಪುಸ್ತಕದ ಪ್ರಕಾಶಕರು ಕಂಬಳಿಯವರನ್ನು "ವೀರಶೈವ ಸಮಾಜವನ್ನು ಸಂಕ್ರಮಣದಿಂದ ಉತ್ತರಾಯಣಕ್ಕೆ ಮುನ್ನಡೆಸಿದ"ರೆಂದು (ಪುಟ 4) ಹೇಳಿದ್ದಾರೆ. ಅವರು ವೀರಶೈವ ಸಮಾಜದ ಪ್ರಗತಿ ವಿರೋಧಿಯಾಗಿದ್ದ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯನ್ನು ವಿರೋಧಿಸಿದ್ದರೇ ಹೇಗೆ ಎನ್ನುವುದನ್ನು ಪುಸ್ತಕದ ಲೇಖಕರು ತಿಳಿಸಿಲ್ಲ.

ಸರ್ ಸಿದ್ದಪ್ಪ ಕಂಬಳಿಯವರು ಕರ್ನಾಟಕ ವಿಶ್ವ ವಿದ್ಯಾನಿಲಯ ಮತ್ತು ಲಿಂಗರಾಜ ಕಾಲೇಜು ಸ್ಥಾಪನೆಗೆ ಸಹಾಯಕವಾಗಿ ಶ್ರಮಿಸಿದರು. ಮೇಲ್ಮಟ್ಟದ ಈ ಸುಧಾರಣೆ ಆ ಕಾಲಕ್ಕೆ ಹೇಗೆ ಮಹತ್ವಪೂರ್ಣ ಎನ್ನುವುದನ್ನು ಲೇಖಕರು ಚರ್ಚಿಸಿಲ್ಲ. ಯಾವುದೇ ಮಹಾನ್ ವ್ಯಕ್ತಿಯ ಸಾಧನೆಗಳ ಸೀಳು ನೋಟದಲ್ಲಿ ಆ ಕಾಲದ ವೈರುಧ್ಯಗಳನ್ನು ಗುರುತಿಸಬಹುದು. ತನ್ನ ಕಾಲ ಮತ್ತು ದೇಶದಿಂದ ಪ್ರತ್ಯೇಕಿಸಿ ಸರ್ ಸಿದ್ದಪ್ಪ ಕಂಬಳಿಯವರ ಜೀವನ ಮತ್ತು ಸಾಧನೆಗಳನ್ನು ವರ್ಣಿಸಿರುವುದು ಈ ಪುಸ್ತಕದ ಮಿತಿ. "ಚಪ್ಪರದ ಮನೆಯಿಂದ ಬಕಿಂಗ್ ಹ್ಯಾಮ್ ಅರಮನೆಯವರೆಗೆ ತಮ್ಮ ಖ್ಯಾತಿಯನ್ನು ಹಬ್ಬಿಸಿಕೊಂಡಿದ್ದ ಕಂಬಳಿಯವರ ಬಗೆಗೆ ನನ್ನಲ್ಲಿ ಪ್ರಶಂಸೆಯಲ್ಲದೆ ಬೇರೆ ಇನ್ನೇನೂ ಇಲ್ಲ" (ಪುಟ 7) ಎನ್ನುವ ಪಾಟೀಲ ಪುಟ್ಟಪ್ಪನವರ ನಿಲುವಿನಿಂದ, ಇತಿಹಾಸ

ಪ್ರಜ್ಞೆಯ ಕೊರತೆಯಿಂದ, ಈ ಪುಸ್ತಕ ಒಂದು ಅರ್ಥಪೂರ್ಣ ಅಧ್ಯಯನ ವಾಗುವ ಸಾಧ್ಯತೆಯನ್ನು ಕಳೆದುಕೊಂಡಿದೆ.

ಈ ಪುಸ್ತಕವನ್ನು ವಿಮರ್ಶಿಸುತ್ತಾ—

"ಈ ಶತಮಾನದ ಪೂರ್ವಾರ್ಧ ಪೂರ್ತಿ ಮುಂಬೈ ಕರ್ನಾಟಕದ ಸಾರ್ವಜನಿಕ ಜೀವನದಲ್ಲಿ ಹಿಂದುಳಿದ ಮೂಕ ಜನತೆಯ ಆಸೆ ಆಕಾಂಕ್ಷೆಗಳ ಯಥ್ವತ್ ಪ್ರತಿನಿಧಿಯಾಗಿ ಬದುಕಿದ ಸರ್ ಸಿದ್ದಪ್ಪ ಕಂಬಳಿಯವರು..."

"ಅವರು ಒಟ್ಟು ಕಡೆಗಣಿಸಲಾದ ಜಾತಿ ವರ್ಗಗಳ ನೆಚ್ಚಿನ ಕಿಂಕರರೂ ಅಭಿಮಾನದ ಸೆಲೆಯೂ, ಸಂಪತ್ತೂ ಆಗಿದ್ದರೆನ್ನುವುದು ಅತ್ಯಂತ ಹೆಮ್ಮೆಯ ಸಂಗತಿಯಾಗಿದೆ" (ಪ್ರಜಾವಾಣಿ, ಸಾಪ್ತಾಹಿಕ ಪುರವಣಿ, 3–10–82) ಎನ್ನುವ ಕಾಳೇಗೌಡ ನಾಗವಾರರ ಹೊಗಳಿಕೆಯ ಮಾತುಗಳಿಗೆ ಈ ಪುಸ್ತಕದಲ್ಲಿ ಸಮರ್ಪಕ ಆಧಾರಗಳಿಲ್ಲ.

ಯಾವುದೇ ವ್ಯಕ್ತಿಯ ಸಾಧನೆಗಳನ್ನು ಗೌರವಿಸಲು ಸಾಧ್ಯವಾಗುವುದು ವಿಶ್ಲೇಷಿಸುವುದರ ಮೂಲಕವೇ ಹೊರತು ವೈಭವೀಕರಿಸುವುದರ ಮೂಲಕ ಅಲ್ಲ.

# ಅಂತರ್ಜಾತೀಯ ವಿವಾಹ–ಒಂದು ಟಿಪ್ಪಣಿ

ಮಹಾಬಲೇಶ್ವರರಾವ್

ಇಂದು ಬಹುತೇಕ ಜಾತಿಗಳಲ್ಲಿ ಮದುವೆ ಒಂದು ಉದ್ಯಮವಾಗಿಬಿಟ್ಟಿದೆ. ಹುಡುಗನ ವಿದ್ಯೆ, ಅಧಿಕಾರ, ಅಂತಸ್ತು, ಆಸ್ತಿಯ ಆಧಾರದ ಮೇಲೆ ವರದಕ್ಷಿಣೆ, ಮಧುಪರ್ಕಾದಿಗಳ ನಿರ್ಣಯ. ಇಂದಿನ ಮದುವೆಗಳಿಗೂ ಹೋರಿಪೈರಿನ ವ್ಯಾಪಾರಕ್ಕೂ ಈಗ ಬಹಳ ವ್ಯತ್ಯಾಸವೇನೂ ಉಳಿದಿಲ್ಲ. ಹೋರಿಗೆ ಹಲ್ಲೆಷ್ಟು ? ಕೊಂಬು ಹೇಗಿದೆ ? ಇತ್ಯಾದಿ ಅಂಶಗಳ ಮೇಲೆ ದರ ನಿಗದಿಯಾಗುವಂತೆ ವರನ ಬೆಲೆಯ ಚೌಕಾಸಿ ನಡೆಯುತ್ತದೆ. ಬ್ಯಾಂಕ್ ಉದ್ಯೋಗಿ, ಸರ್ಕಾರಿ ನೌಕರ, ಆಸ್ತಿವಂತ, ವೈದ್ಯ, ಇಂಜಿನಿಯರ್, ಶಾಲಾಮಾಸ್ತರ, ಪ್ರಾಧ್ಯಾಪಕ ಇವರೆಲ್ಲರ ಬೆಲೆ ಗಾಬರಿ ಹುಟ್ಟಿಸುವ ಮಟ್ಟಕ್ಕೆ ಏರಿದೆ ಕೆಲವು ಜಾತಿಗಳಲ್ಲಿ. ವರದಕ್ಷಿಣೆ ಕೊಡುವುದು, ತೆಗೆದುಕೊಳ್ಳುವುದು ಕಾನೂನುರೀತ್ಯಾ ಅಪರಾಧ ವಾದರೂ ಮುಚ್ಚುಮರೆಯಲ್ಲಿ ನಡೆಯುವ ಈ ವ್ಯಾಪಾರ ಎಂಥವರನ್ನೂ ದಂಗು ಬಡಿಸುತ್ತದೆ ! ಇಂಥ ಸಂದರ್ಭದಲ್ಲಿ ಗಂಡು ಹೆಣ್ಣು ಒಬ್ಬರನ್ನೊಬ್ಬರು ಕಂಡು, ಕಲೆತು, ವಿಚಾರ ವಿನಿಮಯ ನಡೆಸಿ ಪ್ರೀತಿಯಿಂದ ಒಂದಾಗುವ ಮಾತಿಗೆ ಯಾವ ಬೆಲೆಯೂ ಸಲ್ಲುತ್ತಿಲ್ಲ. ಪ್ರಾಯಕ್ಕೆ ಬಂದ ಗಂಡುಹೆಣ್ಣಿನ ಭಾವನೆಗಳನ್ನು ಕೇಳುವ ವ್ಯವಧಾನ ತಂದೆತಾಯಿಗಳಿಗಿಲ್ಲ. ತಮ್ಮ ವೈಯಕ್ತಿಕ ಒಣಪ್ರತಿಷ್ಠೆ, ಗೌರವ ಅಂತಸ್ತು, ಜಾತಿಮರ್ಯಾದೆ ಮುಂತಾದ ಅಮೂರ್ತವೂ ಅವೈಚಾರಿಕವೂ ಆದ ಅಂಶಗಳೇ ಅವರಿಗೆ ಮುಖ್ಯ. ವರದಕ್ಷಿಣೆಯ ಈ ಪಿಡುಗಿನಿಂದ, ಉಸಿರು ಕಟ್ಟಿಸುವ ಈ ಬಂಧನದಿಂದ ನಮ್ಮ ಸಮಾಜ ಮುಕ್ತವಾಗಲು ಇರುವ ಮಾರ್ಗೋಪಾಯವೆಂದರೆ ಪ್ರೇಮವಿವಾಹ.

ಹಿಂದೂ ಸಮಾಜದಲ್ಲಿ ಜಾತೀಯತೆ ಒಂದು ವಿಷವೃಕ್ಷವಾಗಿ ಬೆಳೆದಿದೆ. "ಹಿಂದೂಗಳಾದ ನಾವೆಲ್ಲರೂ ಒಂದೇ ಎಂದು ಏಕತೆಯ ಮಂತ್ರ ಉದ್ಘೋಷಿ

ಸುವ ಜನ ಅದೇ ಉಸಿರಲ್ಲಿ ತಮ್ಮ ಜಾತಿಯ ನಾಮೋಚ್ಚಾರಮಾಡುತ್ತಾ ಹೆಮ್ಮೆಪಡುತ್ತಾರೆ. ತಂತಮ್ಮ ಜಾತಿಯೇ ಶ್ರೇಷ್ಠವೆಂದು ಹೆಗ್ಗಳಿಕೆ ಕೊಚ್ಚುತ್ತಾ ಉಳಿದವರನ್ನು ಕೀಳಾಗಿ ಕಾಣುತ್ತಾರೆ. ಮತ್ತೊಂದೆಡೆ "ಸರಕಾರದ ಸುಕ್ರುಂಡೆ" ಗಾಗಿ ಹಲ್ಲುಗಿಂಜುತ್ತಾರೆ. ಜಾತೀಯತೆಯಿಂದ ಮುಕ್ತವಾದ ಸಮಾನತೆಯ ನೆಲೆಯ ಹೊಸ ಸಮಾಜನಿರ್ಮಾಣ ಸಾಧ್ಯವಾಗಬೇಕಾದರೆ ನಮ್ಮಲ್ಲಿ ವಿವಿಧ ಜಾತಿಗಳಿಗೆ ಸೇರಿದ ಗಂಡು ಹೆಣ್ಣುಗಳಲ್ಲಿ ಪರಸ್ಪರ ವಿವಾಹ ಸಂಬಂಧ ಏರ್ಪಡ ಬೇಕು. ಅಂತರ್ಜಾತೀಯ ಪ್ರೇಮ ವಿವಾಹಗಳು ಪ್ರಗತಿಪರ ಸಮಾಜ ರಚನೆಯ ತಳಹದಿಯಾಗಬೇಕು.

ಇಂದು ಅಂತರ್ಜಾತೀಯ ವಿವಾಹಗಳು ತಕ್ಕಮಟ್ಟಿಗೆ ಎಲ್ಲ ಕಡೆ ನಡೆಯುತ್ತಿವೆಯಾದರೂ ಇವನ್ನು ಸ್ವೀಕರಿಸಲು, ಆಗುಮಾಡಲು ನಮ್ಮ ವಿದ್ಯಾವಂತ ಯುವಕ ಯುವತಿಯರಿಗೆ ಇನ್ನೂ ಧೈರ್ಯ ಬಂದಿಲ್ಲ. ನಮ್ಮ ವಿದ್ಯಾವಂತರ ವಿಚಾರ ಕ್ರಮದಲ್ಲಿ ಆಗಿರುವ ಬದಲಾವಣೆ ಕೇವಲ ಮೇಲ್ಮೈ ಬದಲಾವಣೆ ಮಾತ್ರ. ಆತ್ಯಂತಿಕವಾದ ಬದಲಾವಣೆಗೆ ಇವರಿನ್ನೂ ಸಿದ್ಧರಾಗಿಲ್ಲ. ಎಂತಲೆ ಅಂತರ್ಜಾತೀಯ ವಿವಾಹದ ಹಂಬಲವಿದ್ದರೂ ಹಿಂದೇಟು ಹಾಕುತ್ತಾರೆ. ಅಪ್ಪ, ಅಮ್ಮ, ಬಂಧು–ಬಳಗ, ಸಮಾಜಕ್ಕೆ ಹೆದರಿ ತಮ್ಮನ್ನು ಮನಸಾರೆ ಪ್ರೀತಿಸಿದ, ನಂಬಿದ ಹುಡುಗನಿಗೋ ಹುಡುಗಿಗೋ ಕೈ ಕೊಡುತ್ತಾರೆ. "ಮರೆತುಬಿಡು ನನ್ನನ್ನು", "ದಯವಿಟ್ಟು ಕ್ಷಮಿಸಿ" "ತಂದೆತಾಯಿಗಳ ಪ್ರಾಣ, ಮಾನ ಮುಖ್ಯ" ಇತ್ಯಾದಿ ಅರ್ಥಹೀನ ಮಾತುಗಳನ್ನಾಡಿ ಭಾವನಾತ್ಮಕ ಭದ್ರತೆ ಒದಗಿಸುವುದೆಂದು ನಂಬಲಾದ ಸಾಂಪ್ರದಾಯಿಕ ವಿವಾಹಕ್ಕೆ ಕೊರಳೊಡ್ಡುತ್ತಾರೆ. ಎಲ್ಲರನ್ನು, ಎಲ್ಲವನ್ನು ಎದುರಿಸುವ ನೈತಿಕ ಎದೆಗಾರಿಕೆ, ಮನಸ್ಸಿನ ದೃಢತೆಗೆ ಅಗತ್ಯವಾದ ಒಂದು ಸಿದ್ಧಾಂತ, ತಾನು ಪ್ರೀತಿಸಿದ ವ್ಯಕ್ತಿಗಾಗಿ ಪ್ರಾಣಕೊಡಲೂ ಹಿಂಜರಿಯದ ಛಲವಿದ್ದಾಗ ಮಾತ್ರ ಯಾರೂ ಏನೂ ಮಾಡಲಾರರು ಎಂಬುದನ್ನು ಯುವ ಪ್ರೇಮಿಗಳು, ಅಂತರ್ಜಾತೀಯ ವಿವಾಹಾಪೇಕ್ಷಿಗಳು ಅರಿಯಬೇಕು. ಇಲ್ಲವಾದರೆ ಪ್ರೀತಿಯ ದುಡುಕಿಗೆ ಕೈಹಾಕಲು ಯಾರಿಗೂ ಯಾವ ನೈತಿಕ ಹಕ್ಕೂ ಇಲ್ಲ.

ಡಾ|| ಶಿವರಾಮ ಕಾರಂತ, ಡಾ|| ಅನುಪಮಾ, ಡಾ|| ಅನಂತಮೂರ್ತಿ ಅಂತರ್ಜಾತೀಯ ವಿವಾಹ ಆದಾಗ ಇದ್ದ ಸ್ಥಿತಿ ಈಗ ಇಲ್ಲ. ಸುಧಾರಣೆ ಆಗಿದೆ. ಈ ಬಗೆಯಲ್ಲಿ ಮದುವೆ ಆಗುವವರಿಗೆ ಈಗ ಸಾಮಾಜಿಕ ಬಹಿಷ್ಕಾರದ ಭೀತಿ ಯಿಲ್ಲ. (ಕೌಟುಂಬಿಕ ಬಹಿಷ್ಕಾರದ ಭೀತಿ ತಪ್ಪಿಲ್ಲ.) ಆಧುನಿಕ ಶಿಕ್ಷಣದ ದೆಸೆಯಿಂದಾಗಿ ಇಂಥ ವಿವಾಹಗಳನ್ನು ಬೆಂಬಲಿಸುವವರ ಸಂಖ್ಯೆ ಸಾಕಷ್ಟಿದೆ. ಜಾತಿ ಒಂದು ಪೊಳ್ಳು ಮೌಲ್ಯ ಎಂಬುದನ್ನು ಈಗಾಗಲೆ ಅನೇಕರು ಮನ

ಗಂಡಿದ್ದಾರೆ. ಆದರೂ ಹೀಗೆ ಮದುವೆಯಾಗುವವರು ಕೆಲವು ಸಮಸ್ಯೆಗಳನ್ನು ಧೈರ್ಯದಿಂದ ಎದುರಿಸಲೇಬೇಕಾಗಿದೆ.

ವಿಭಿನ್ನ ಜಾತಿಗೆ ಸೇರಿದ ಗಂಡು ಹೆಣ್ಣು ಪ್ರೀತಿಸಿ ಮದುವೆ ಆಗುವುದೆಂದು ನಿಶ್ಚಯಿಸಿ ಕೊನೆಯುಗಳಿಗೆಯಲ್ಲಿ ಯಾರಾದರೊಬ್ಬರು ಸಮಾಜಕ್ಕೆ, ಮಾನ ಮರ್ಯಾದೆಗೆ ಹೆದರಿ ಹಿಂದೇಟು ಹೊಡೆದಾಗ ಆಗುವ ನೋವು ಅವರ್ಣನೀಯ. ಅದೊಂದು ಯಮಯಾತನೆ. ವಂಚಿತರಿಗೆ ಇಡೀ ಬದುಕೇ ಶೂನ್ಯವಾಗಿ ಕಂಡರೆ ಅಚ್ಚರಿಯೇನಲ್ಲ. ಈ ಬಗೆಯ ನೋವಿನ ಶಮನ ದುಸ್ಸಾಧ್ಯ. ತಂದೆ-ತಾಯಿಗಳ ವಿರೋಧವನ್ನು ಊಹಿಸಿ ರಿಜಿಸ್ಟ್ರಿ ಮದುವೆ ಆದಾಗ, ಆಗುವ ಸ್ಥಿತಿಯಲ್ಲಿರುವಾಗ ಗಂಡು ಹೆಣ್ಣುಗಳ ಮೇಲೆ ಅದಮ್ಯವಾದ ಒತ್ತಡ ಹೇರಲಾಗುತ್ತದೆ. ಅದರಲ್ಲೂ ಈ ಒತ್ತಡದ ಪ್ರಮಾಣ ಹೆಣ್ಣಿನ ಮೇಲೆ ಹೆಚ್ಚು. ಹೆಣ್ಣನ್ನು ಗೃಹಬಂಧನದಲ್ಲಿಟ್ಟು, ಹೆದರಿಸಿ, ಬೆದರಿಸಿ, ಹೊಡೆದು ಬಡಿದು ಚಿತ್ರಹಿಂಸೆಯ ಮೂಲಕ ನಿರ್ಧಾರವನ್ನು ಬದಲಿಸುವಂತೆ ಮಾಡಲಾಗುತ್ತದೆ.

ತಂದೆತಾಯಿ, ಬಂಧುಬಳಗದ ಜೊತೆ ಬೆಳೆದ ಹೆಣ್ಣು ಅದೆಷ್ಟೇ ಗಟ್ಟಿ ಮನಸ್ಸಿನವಳಾದರೂ ದಮನಕ್ಕೆ ಬಲಿಯಾಗಿ ತನ್ನ ನಿರ್ಧಾರವನ್ನು ಬದಲಿಸಲು ಮನ ಮಾಡುವುದು ಸಹಜ. ಹೆಣ್ಣಿನ ಸಂಕಟ ಇದಾದರೆ ಗಂಡಿನ ತೊಳಲಾಟ ಇನ್ನೊಂದು ಪರಿ. ಹೆಣ್ಣಿನ ಬಳಗದವರು ಗಂಡನ್ನು ಕಂಡು "ಒಂದು ಕೈ ನೋಡುತ್ತೇವೆ", "ಮುಖಕ್ಕೆ ಆ್ಯಸಿಡ್ ಎರಚುತ್ತೇವೆ", "ಕೈಕಾಲು ಮುರಿಯುತ್ತೇವೆ", "ನಾಮಾವಶೇಷ ಮಾಡುತ್ತೇವೆ" ಇತ್ಯಾದಿ ಪ್ರಾಣಭೀತಿಯ ಮಾತಾಡಿ ಬಗ್ಗು ಬಡಿಯಲು ನೋಡುತ್ತಾರೆ. ಇದೆಲ್ಲದರ ಜೊತೆಗೆ ಚಾರಿತ್ರ್ಯಹನನ-ಮಾನಹಾನಿಯ ಮಾತುಗಳನ್ನು ಹರಡಿ ಆತನ ಮಾನಸಿಕ ವೇದನೆಯನ್ನು ಅಸಹನೀಯಗೊಳಿಸುತ್ತಾರೆ. ಮತ್ತೆ ಗಂಡಿಗೆ ತನ್ನ ಮನೆಯಲ್ಲಿ ವಿರೋಧ ತಪ್ಪಿದ್ದಲ್ಲ. ಎರಡೂ ಕಡೆಯ ಬೆದರಿಕೆಗಳನ್ನು ಆತ ಏಕಾಂಗನಾಗಿ ಎದುರಿಸಬೇಕು. ಈ ಎಲ್ಲ ಟೆನ್ಷನ್‌ಗಳ ನಡುವೆಯೂ ಪೋಲಿಸರ ನೆರವಿನಿಂದ ಹುಡುಗಿಯನ್ನು ಪಾರು ಮಾಡಿದರೂ ಭಾವನಾತ್ಮಕ ಸಮಸ್ಯೆಗಳು ಸ್ವಲ್ಪ ಸಮಯ ಇದ್ದೇ ಇರುತ್ತವೆ. ಇದೆಲ್ಲವೂ ಪ್ರಾರಂಭಿಕ ಹಂತದಲ್ಲಿ ನಿರೀಕ್ಷಿತವೇ ಆದರೂ ಇಂಥ ಆಯತ ಗಳಿಗೆಯಲ್ಲಿ ಗಂಡುಹೆಣ್ಣುಗಳಿಬ್ಬರಲ್ಲೂ ಬಹಳ ಅಗತ್ಯವಾದದ್ದು ಎಲ್ಲದಕ್ಕೂ ಎದೆಕೊಡುವ, ಪ್ರಾಣವನ್ನು ಪಣವಾಗಿಡುವ ಅಸೀಮ ಧೈರ್ಯ. ಎದೆಗಾರಿಕೆಯಿದ್ದರೆ ಮುಂದೆ ಎಲ್ಲವೂ ಸುರಳೀತ, ಸುಲಭ ಎಂಬ ದೃಢ ನಂಬಿಕೆ, ಪರಸ್ಪರ ವಿಶ್ವಾಸ ಬೇಕು.

ಅಂತರ್ಜಾತೀಯ ವಿವಾಹಗಳು ಪ್ರಾರಂಭದಲ್ಲಿ ಯಶಸ್ವಿಯಾದರೂ ಪ್ರೇಮದ ಬಿಸಿಯುಪ್ಪುಗೆ ಕರಗಿದ ಮೇಲೆ ಒಳಗಿನ ಅಸಮಾಧಾನ, ಅತೃಪ್ತಿ, ಆತಂಕಗಳು ಹೆಡೆಎತ್ತಿ ಬಿರುಕು ಉದ್ಭವಿಸುತ್ತದೆ ಎಂಬುದು ಪ್ರಚಲಿತ 'ನಂಬಿಕೆ'. ಇಂಥ ವಿಚಾರಗಳಲ್ಲಿ ಸಾಮಾನ್ಯವಾಗಿ ನಮ್ಮ ಮನೋಧರ್ಮಕ್ಕೆ ಒಗ್ಗುವ ಸಂಗತಿಗಳನ್ನೇ ನಾವು ಸ್ವೀಕರಿಸುತ್ತೇವೆ. ಉಡುಪಿ ಮತ್ತು ಕೋಟದ ಜನ ಬೇರೆ ಊರುಗಳಲ್ಲಿ ಹೋಟೆಲಿಟ್ಟು ಯಶಸ್ವಿಯಾದದ್ದನ್ನೇ ನಾವು ಎತ್ತಿ ಹೇಳುತ್ತೇವೆ ಹೊರತು ಸೋತ ನಿದರ್ಶನಗಳನ್ನಲ್ಲ. ಹಾಗೆಯೇ ಅಂತರ್ಜಾತೀಯ ವಿವಾಹಗಳು ಯಶಸ್ವಿ ಆಗಿರುವ ನಿದರ್ಶನಗಳು ನಮ್ಮ ಪಕ್ಷಪಾತಿ ದೃಷ್ಟಿಗೆ ಕಾಣುವುದಿಲ್ಲ. ಕಂಡರೂ ಬೇಕೆಂತಲೆ ಅವನ್ನು ಮರೆ ಮಾಡುತ್ತೇವೆ. ಅಂತರ್ಜಾತೀಯ ವಿವಾಹದ ಯಶಸ್ಸು ಕೊನೆಗೂ ಗಂಡು ಹೆಣ್ಣು ಒಬ್ಬರನ್ನೊಬ್ಬರು ಎಷ್ಟು ಅರ್ಥಮಾಡಿಕೊಂಡಿದ್ದಾರೆ ಎಂಬುದನ್ನು ಅವಲಂಬಿಸಿದೆ. ಹಾಗೆ ನೋಡಿದರೆ, ಮದುವೆ ಯಾವುದೇ ಆಗಿರಲಿ, ಅದರ ಯಶಸ್ಸಿನ ತಳಹದಿ ಪರಸ್ಪರ ತಿಳಿವಳಿಕೆಯೇ ಆಗಿದೆ.

ಅಂತರ್ಜಾತೀಯ ವಿವಾಹ ಆಗುವವರನ್ನು ಸಾಮಾನ್ಯವಾಗಿ ಕಾಡುವ ಚಿಂತೆ ತಮಗೆ ಹುಟ್ಟುವ ಮಕ್ಕಳ ಮದುವೆಯ ಚಿಂತೆ. 'ಜಾತಿ ಬಿಟ್ಟವರ' ಮಕ್ಕಳನ್ನು ಮದುವೆ ಆಗುವವರು ಯಾರು ? ಗಂಡಹೆಂಡಿರಿಬ್ಬರ ಜಾತಿಯವರು ವಿವಾಹ ಪ್ರಸ್ತಾವಕ್ಕೆ ಒಪ್ಪುವುದಿಲ್ಲ. ಹೀಗಾದರೆ ತಮ್ಮ ಮಕ್ಕಳು ಮದುವೆಯಿಲ್ಲದೆ ಅತಂತ್ರರಾಗುತ್ತಾರಲ್ಲ ? ಆದರೆ ಪರಿಸ್ಥಿತಿ, ಮೌಲ್ಯಗಳು ಕ್ರಮೇಣ ಬದಲಾಗುತ್ತಿವೆ. ಜನರ ಧೋರಣೆಗಳು ನಿಧಾನವಾಗಿಯಾದರೂ ಈ ವಿಷಯದಲ್ಲಿ ಸಡಿಲಗೊಳ್ಳುತ್ತಿವೆ. ಮೇಲಾಗಿ ಅಂತರ್ಜಾತೀಯ ವಿವಾಹ ಆಗುತ್ತಿರುವ ಯುವಕ ಯುವತಿಯರ ಸಂಖ್ಯೆ ಕ್ರಮೇಣ ಹೆಚ್ಚುತ್ತಿದೆ. ಮುಂದೆ ಇವರದೇ ಒಂದು ವರ್ಗ ಆಗುತ್ತದೆ. ಇನ್ನು ಹಲವು ವರ್ಗಗಳ ನಂತರ ಈ ಸಂತತಿಗಳ ವಿವಾಹ ಭೀಕರ ಸಮಸ್ಯೆಯಂತೂ ಖಂಡಿತಾ ಆಗಲಾರದೆಂಬುದನ್ನು ಮನಗಾಣಬೇಕು. ನಮ್ಮ ವಿದ್ಯಾವಂತ ತರುಣ ತರುಣಿಯರು ಉದ್ಯೋಗಾರ್ಥಿಗಳಾಗಿ ನಗರಗಳಿಗೆ ವಲಸೆ ಹೋಗುತ್ತಿರುವಾಗ, ನಗರ ಜೀವನ ಜಾತಿಮುಕ್ತವಾಗಿ ಅಥವಾ ಕಾಸ್ಮೊಪಾಲಿಟನ್ ಆಗುತ್ತಿರುವಾಗ ಇದೊಂದು ಸಮಸ್ಯೆಯೇ ಅಲ್ಲ.

ಜಾತ್ಯತೀತ ಪ್ರಗತಿಪರ ಸಮಾಜ ರಚನೆಗೆ ನಿರ್ಧರಿಸುವ ಇಂದಿನ ಯುವ ಜನಾಂಗ ಅಂತರ್ಜಾತೀಯ ವಿವಾಹವಾಗಲು ಮುಂದಾಗಬೇಕು. ಹಣ, ಪ್ರತಿಷ್ಠೆ, ಸೌಂದರ್ಯ, ಜಾತಿ, ಮರ್ಯಾದೆ ಮುಂತಾದ ಪೊಳ್ಳು ಮೌಲ್ಯಗಳನ್ನು ಧಿಕ್ಕರಿಸಿ ಸಮಾನತೆ, ಸಹೋದರತೆ, ಸಹಬಾಳ್ವೆಯ ಸಿದ್ಧಾಂತವನ್ನು ಸ್ವೀಕರಿಸಿ ಧೈರ್ಯ, ಎದೆಗಾರಿಕೆ, ಮನಃಸ್ಥೈರ್ಯದಿಂದ ಇತಿಹಾಸ ಚಕ್ರದ ಚಾಲನೆಗೆ ಕೈ ಹಚ್ಚಬೇಕು.

ಎಂಥ ಗಂಭೀರ ಸ್ಥಿತಿಯಲ್ಲೂ ತಮ್ಮ ನಿರ್ಧಾರದಿಂದ ವಿಚಲಿತರಾಗದೆ ಎಲ್ಲ ಅಪಾಯಗಳಿಗೂ ಎದೆಯೊಡ್ಡುವ ತೀರ್ಮಾನ ಕೈಗೊಳ್ಳಬೇಕು.

ತಂದೆತಾಯಿಗಳು, ಬಂಧುಬಳಗದವರು ಅಂತಸ್ತು, ಮರ್ಯಾದೆ, ಜಾತಿ ಮುಂತಾದವನ್ನು ಕಡೆಗಣಿಸಿ ಗಂಡುಹೆಣ್ಣುಗಳ ಆಲೋಚನಾ ಕ್ರಮವನ್ನು ಅರ್ಥ ಮಾಡಿಕೊಂಡು ಅವರೇನೇ ತಪ್ಪು ಮಾಡಿದ್ದರೂ ಕೂಡಾ ಅದನ್ನು ಕ್ಷಮಿಸಿ– "ನಿಮ್ಮ ಬದುಕು ಹಸನಾಗಲಿ" ಎಂದು ಹರಸುವ ಔದಾರ್ಯ ತೋರಬೇಕು. ಹೀಗೆ ಮಾಡುವುದರ ಮೂಲಕವೇ ಅವರು ನಿಜವಾಗಿಯೂ ಹಿರಿಯರಾಗುತ್ತಾರೆಯೇ ಹೊರತು ಪ್ರೀತಿ ಅನುರಾಗಗಳನ್ನು ದಬ್ಬಾಳಿಕೆಯಿಂದ ಮುರಿಯುವುದರಿಂದಲ್ಲ. ಬಲಾತ್ಕಾರ, ಒತ್ತಡದಿಂದ ಆದ ಮದುವೆಯನ್ನು ಮುರಿಯುವುದರ ಮೂಲಕ ಗಂಡುಹೆಣ್ಣುಗಳ ಭವಿಷ್ಯ ನರಕ ಸದೃಶವಾಗುವುದಲ್ಲದೆ ಈ ಹತಾಶ ಪ್ರೇಮಿಗಳು ಜೀವನ ಪರ್ಯಂತ ಇಂಥ ಹಿರಿಯರನ್ನು ಎಂದೂ ಗೌರವಿಸಲಾರರು ; ಕ್ಷಮಿಸಲಾರರು. ಹಿರಿತನಕ್ಕೊಪ್ಪುವ ನಡತೆಯಿಂದ ಮಾತ್ರ ಹಿರಿಯರು ಆದರಣೀಯರಾಗುತ್ತಾರೆ.

ಸರಕಾರ ಹಾಗೂ ಸ್ವಯಂಸೇವಾ ಸಂಘಗಳು ಅಂತರ್ಜಾತೀಯ ವಿವಾಹವನ್ನು ಇನ್ನೂ ಹೆಚ್ಚು ಪ್ರೋತ್ಸಾಹಿಸಬೇಕು. ಈಗಿರುವುದಕ್ಕಿಂತ ಹೆಚ್ಚಿನ ಭದ್ರತೆ, ರಕ್ಷಣೆ ಹಾಗೂ ಸವಲತ್ತುಗಳು ಈ ಬಗೆಯ ವಿವಾಹಾಕಾಂಕ್ಷಿಗಳಿಗೆ ದೊರೆಯಬೇಕು. ಇಂಥ ವಿವಾಹಗಳು ಘಟಿಸಿದ ಮೇಲೆಯೂ ವಿರೋಧಿಸುವವರನ್ನು ಸರಕಾರ ಉಗ್ರವಾಗಿ ದಂಡಿಸಬೇಕು.

ಇಂಥ ಮದುವೆಗಳನ್ನು ವಿರೋಧಿಸುವ, ದಮನಿಸುವ, ಬಗ್ಗು ಬಡಿಯಲು ರಾಕ್ಷಸೀ ಕೃತ್ಯಗಳಿಗೆ ಮೊರೆ ಹೋಗುವ ಪ್ರತಿಗಾಮಿ ಶಕ್ತಿಗಳ ವಿರುದ್ಧ ಪ್ರಗತಿಪರರೆಂದು ಕರೆದುಕೊಳ್ಳುವವರು, ಜನವಾದಿ ಶಕ್ತಿಗಳು, ಸಂಘಸಂಸ್ಥೆಗಳು, ರಾಜಕೀಯ ಪಕ್ಷಗಳು, ಪತ್ರಿಕೆಗಳು, ಬುದ್ಧಿಜೀವಿಗಳು, ಅಧ್ಯಾಪಕರು, ಸಾಹಿತಿಗಳು ಸಂಘಟಿತರಾಗಿ ಹೋರಾಟ ನಡೆಸಬೇಕು. ಯಾವ ಪಕೀಲಿಗೂ ಮಣಿಯದೆ, ರಾಜಿ ಒಪ್ಪಂದಗಳಿಗೆ ಸಹಿ ಹಾಕದೆ ಸಂಘರ್ಷದ ಹಾದಿ ತುಳಿಯುವ ಮೂಲಕವೇ ನಾವು ಸರ್ವಸಮಾನತೆಯ, ಭ್ರಾತೃತ್ವದ ಸ್ನೇಹ ಅನುರಾಗಗಳ ನಾಡನ್ನು ಕಟ್ಟಬಲ್ಲೆವು.

# ದಲಿತ ಸಾಹಿತ್ಯ—ಒಂದು ನೋಟ

ಎಲ್. ಹನುಮಂತಯ್ಯ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪಂಪನಿಂದ ಇಂದಿನವರೆಗೆ ಆಯಾ ಕಾಲ ಘಟ್ಟದಲ್ಲಿ, ಅಲ್ಲಿನ ಚಾರಿತ್ರಿಕ, ಸಾಮಾಜಿಕ ಪರಿಸರಕ್ಕೆ ಸಂಬಂಧ ಪಟ್ಟಂತೆ ಹೊರಟ ಜನಪರ ದನಿಗಳನ್ನು ಗುರುತಿಸಬಹುದು. ಹನ್ನೆರಡನೆ ಶತಮಾನದಲ್ಲಿ ಮೂಡಿದ ವಚನಕಾರರ ಚಳುವಳಿ ಒಂದು ಸಾಮೂಹಿಕ ಸಾಹಿತ್ಯ ಸೃಷ್ಟಿ. ಸಮಾಜದ ಎಲ್ಲ ಪದರದ ಜನಗಳನ್ನೂ ಒಟ್ಟುಗೂಡಿಸಿಕೊಂಡು ತಮ್ಮದೇ ಆದ ಆಧ್ಯಾತ್ಮಿಕ ಮಾರ್ಗದಲ್ಲಿ ಸಮಾಜದಲ್ಲಿನ ಜಾತಿ ಪಿಡುಗನ್ನು ಹೋಗಲಾಡಿಸಲು ಹೊರಟ ಮೊಟ್ಟಮೊದಲ ಶ್ರೀಸಾಮಾನ್ಯನ ಪಕ್ಷಪಾತಿ ಚಳುವಳಿಯೆನ್ನಬಹುದು. ಯಾವುದೇ ಕಾಲದ ಸಾಹಿತ್ಯ ಆ ಸಮಾಜದ ಪ್ರತಿಬಿಂಬ. ಹಾಗೆಯೇ ಕನ್ನಡ ಸಾಹಿತ್ಯ ಚರಿತ್ರೆಯೂ ಆಯಾ ಕಾಲದ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ವಿಚಾರಗಳನ್ನು ಹಿಡಿದಿಟ್ಟಿದೆ. ಚರಿತ್ರೆಯ ಅನೇಕ ಅಂಶಗಳು ನಮ್ಮ ಸಾಹಿತ್ಯ ಕೃತಿಗಳಲ್ಲಿ ದಾಖಲಾಗಿವೆ

ಇಂಡಿಯಾ ದೇಶದ ಸಾಂಸ್ಕೃತಿಕ ಸಂದರ್ಭದಲ್ಲಿ ಸಾಹಿತ್ಯ, ಸಮಾಜದ ಕೈಗನ್ನಡಿಯಾಗಿ ಕೆಲಸ ಮಾಡಿರುವುದನ್ನು ಗುರುತಿಸಬಹುದು. ಮುಖ್ಯವಾಗಿ ನಮ್ಮ ಸಮಾಜ ಅನೇಕ ಜಾತಿ ಮತ್ತು ವರ್ಗಗಳಿಂದ ಕೂಡಿರುವಂಥದ್ದು. ಈ ಜಾತಿಗಳು ಅನೇಕ ಮೆಟ್ಟಿಲುಗಳನ್ನು ಹೊಂದಿದೆ. ಈ ಜಾತಿಯ ಮೆಟ್ಟಿಲುಗಳ ಮೇಲ್ಮಟ್ಟದಲ್ಲಿದ್ದ ಪುರೋಹಿತಶಾಹಿವರ್ಗ ಅಕ್ಷರಾಭ್ಯಾಸ ಮತ್ತು ಬೌದ್ಧಿಕ ವಿಚಾರಗಳ ಅಧಿಕಾರ ಹೊಂದಿದ್ದರಿಂದ ಇನ್ನುಳಿದ ಎಲ್ಲ ಕೆಳ ಜಾತಿಗಳು ಅವರ ಸೇವಕರಂತೆ ವರ್ತಿಸಬೇಕಾಯಿತು. ಈ ಬೌದ್ಧಿಕ ದಾಸ್ಯದಿಂದ ಇಡೀ ಸಮಾಜದ ಆಗುಹೋಗುಗಳ ದಾಖಲೆ ಪುರೋಹಿತಶಾಹಿ ವರ್ಗದ ಅನಿಸಿಕೆ ಮಾತ್ರವಾಯಿತು. ಇವರು ಸೃಷ್ಟಿಸಿದ ಸಾಹಿತ್ಯವೇ ಒಟ್ಟು ಸಮಾಜದ ಸಾಂಸ್ಕೃತಿಕ ದಾಖಲೆ ಯಾಯಿತು.

ವರ್ಣ ವ್ಯವಸ್ಥೆಯ ಆಧಾರವುಳ್ಳ ಇಂಡಿಯಾದ ಸಮಾಜದಲ್ಲಿ ವಿವಿಧ ಮೆಟ್ಟಿಲುಗಳಲ್ಲಿರುವ ಜನವರ್ಗ ತಮ್ಮದೇ ಆದ ವಿಶಿಷ್ಟ, ವಿಭಿನ್ನ ಅನುಭವಗಳನ್ನು ಹೊಂದಿರುವುದು ಸಹಜ. ತಮ್ಮ ಅನುಭವಗಳನ್ನು ಆ ವರ್ಗದ ಜನರೇ ಅಭಿವ್ಯಕ್ತಿ ಪಡಿಸುವುದು ಸಾಧ್ಯವಾದರೆ ಸಮರ್ಥವಾದ ಸಾಹಿತ್ಯ ಕೃತಿ ಹೊರಬರುವ ಸಾಧ್ಯತೆ ಇತ್ತು. ಆದರೆ ನಮ್ಮಲ್ಲಿ ಹಾಗಾಗಲಿಲ್ಲ. ಸಮಾಜದ ಬಹುಸಂಖ್ಯಾತ ವರ್ಗಕ್ಕೆ ಅಕ್ಷರದ ಸಾಮೀಪ್ಯವೇ ದೊರೆಯದೆ ಅವರ ಅನುಭವಗಳು ಮರಳುಗಾಡಿನಂತೆ ನಷ್ಟವಾಯಿತು. ಸೃಷ್ಟಿಕ್ರಿಯೆ ಬತ್ತಿ ಹೋಯಿತು. ಇಂಥ ಪರಿಸ್ಥಿತಿಯಲ್ಲಿ ಸಮಾಜದ ಕ್ರೂರ ಹಿಂಸೆಗೆ, ತುಳಿತಕ್ಕೆ ಒಳಗಾಗಿದ್ದ ದಲಿತವರ್ಗ ಮಾತನಾಡುವುದು ಸಾಧ್ಯವೇ ಇಲ್ಲವಾಗಿತ್ತು.

ಚರಿತ್ರೆಯ ಪುಟಗಳಲ್ಲಿ ಬರುವ ಬುದ್ಧ, ಬಸವ ಇಂಥವರ ಧೋರಣೆ ಜನ ಸಾಮಾನ್ಯರ ಪರವಾದ್ದಾಗಿ, ದಲಿತರಲ್ಲಿಯೂ ಸ್ವಲ್ಪ ಎಚ್ಚರ ಮೂಡಿತು. ಇತ್ತೀಚಿನ ಶತಮಾನದ ಪ್ರವರ್ತಕರಾಗಿದ್ದ ಡಾ|| ಅಂಬೇಡ್ಕರ್ ಅವರ ಹೋರಾಟ ಮತ್ತು ಬ್ರಿಟೀಷರ ಆಳ್ವಿಕೆಯ ಪರಿಣಾಮವಾಗಿ ಸಮಾಜದ ಕೆಳವರ್ಗ ಮತ್ತು ದಲಿತ ವರ್ಗಕ್ಕೆ ಅಲ್ಪ ಸ್ವಲ್ಪ ಅಕ್ಷರ ಕಲಿಯುವ ಅವಕಾಶವಾಯಿತು. ಅಕ್ಷರ ಕಲಿತ ಈ ಸಮಾಜದ ಕಡೇ ಮನುಷ್ಯ ಬರವಣಿಗೆಯ ಮೂಲಕ ಮಾತನಾಡಲು ಪ್ರಾರಂಭಿಸಿದ್ದು ಈಗ ನಾವು ಕೇಳುತ್ತಿರುವ ದಲಿತ ಸಾಹಿತ್ಯ.

'ದಲಿತ' ಎಂಬ ಪದ ಸಾಕಷ್ಟು ಚರ್ಚಾಸ್ಪದವಾಗಿದ್ದರೂ ಸಂಘಟನಾತ್ಮಕ ಹೋರಾಟದ ದೃಷ್ಟಿಯಿಂದ ಈ ಪದದ ವ್ಯಾಪ್ತಿಯನ್ನು ದೊಡ್ಡದು ಮಾಡಿ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಶೋಷಿತರಾದ ಎಲ್ಲ ಜನವರ್ಗವನ್ನು ಸೇರಿಸಿದರೂ, ಸಾಹಿತ್ಯಿಕವಾಗಿ ಅಸ್ಪೃಷ್ಟತೆಯನ್ನು ನಿವಾರಿಸಲು ಅಸ್ಪೃಶ್ಯರು ಮತ್ತು ಇವರಷ್ಟೇ ಶೋಷಣೆಗೊಳಗಾದ ಕೆಳವರ್ಗದ ಜನರು ದಲಿತರಾಗುತ್ತಾರೆ. ಡಾ|| ಜಿ. ಎಸ್. ಶಿವರುದ್ರಪ್ಪನವರು ಇದನ್ನು ಸ್ಪಷ್ಟೀಕರಿಸುತ್ತಾ ಹೀಗೆ ಹೇಳುತ್ತಾರೆ. "ದಲಿತರು, ಕೇವಲ ಶೋಷಿತರಷ್ಟೇ ಅಲ್ಲ; ಶೋಷಣೆಯ ಜೊತೆಗೆ ಅಮಾನವೀಯವಾದ ಹಿಂಸೆ–ಕ್ರೌರ್ಯಗಳಿಗೆ ಒಳಗಾದವರು. ಒಂದು ವ್ಯಕ್ತಿತ್ವವೇ ಇಲ್ಲದವರಂತೆ ನಡೆಯಿಸಿಕೊಳ್ಳಲ್ಪಟ್ಟವರು." ಆದ್ದರಿಂದ ಈ ವರ್ಗದ ಜನಕ್ಕೆ ತಮ್ಮದೇ ಆದ ವಿಶಿಷ್ಟ ಅನುಭವಗಳಿರುತ್ತವೆ. ಅನುಭವಗಳನ್ನು ಆಯಾ ವರ್ಗದಿಂದ ಬಂದ ಸಾಹಿತಿಗಳು ಹೇಳಿದರೆ ಹೆಚ್ಚು ವಸ್ತುನಿಷ್ಠವಾಗಿ ಹೇಳಬಲ್ಲರು. ಅದು ನಿಜವಾದ ದಲಿತ ಸಾಹಿತ್ಯವಾಗಬಲ್ಲುದು. ಹಾಗಾದರೆ ದಲಿತ ಸಾಹಿತ್ಯ ಬಂಡಾಯ ಸಾಹಿತ್ಯವೇ ತಾನೆ? ಇದಕ್ಕೆ ಪ್ರತ್ಯೇಕತೆ ಏಕೆ? ಎನ್ನುವವರಿಗೂ ಮತ್ತಷ್ಟು ಸರಳವಾಗಿ ಹೇಳುವುದಾದರೆ ಎಲ್ಲ ಪ್ರಗತಿಗಾಮಿ ದಲಿತ ಸಾಹಿ

ಗಳೆಲ್ಲ ಬಂಡಾಯ ಸಾಹಿತಿಗಳು, ಎಲ್ಲ ಬಂಡಾಯ ಸಾಹಿತಿಗಳು ದಲಿತ ಸಾಹಿತಿಗಳಲ್ಲ–ಎಂದು ಹೇಳಿರುವ, ಬರಗೂರು ರಾಮಚಂದ್ರಪ್ಪನವರ ಮಾತು ಖಚಿತವಾಗಿ 'ದಲಿತ ಸಾಹಿತ್ಯ'ದ ವ್ಯಾಪ್ತಿಯನ್ನು ತಿಳಿಸುತ್ತದೆ.

ದಲಿತರನ್ನು ಮತ್ತು ಅವರ ಸಮಸ್ಯೆಗಳನ್ನು ಕುರಿತು ದಲಿತರಲ್ಲದ ಸಾಹಿತಿಗಳು ಬರದೇ ಇಲ್ಲವೆಂದಲ್ಲ. ಅನೇಕರು ತಮ್ಮ ಅನುಭವಕ್ಕೆ ಬರುವುದನ್ನು ಸಹಾನುಭೂತಿಯಿಂದ ಚಿತ್ರಿಸಿದ್ದಾರೆ. ಇಲ್ಲಿ ದಲಿತ ಜೀವನ ಚಿತ್ರಣ ಬೇರೆ ಪಾತ್ರಗಳ ಪೋಷಕರಾಗಿ ಮತ್ತು ಪೂರಕವಾಗಿ ಚಿತ್ರಿತವಾಗಿರುವ ಅನೇಕ ಕೃತಿಗಳನ್ನು ಕಾಣುತ್ತೇವೆ. ಆದರೆ ಇಲ್ಲಿ ದಲಿತ ಜೀವನ ಚಿತ್ರ ಇಡಿಯಾಗಿ ತನ್ನೆಲ್ಲ ಹಚ್ಚಹಸುರಿನ ಅನುಭವಕ್ಕೆ, ಬಿಸಿಯಾದ ಅನಿಸಿಕೆಗಳೊಂದಿಗೆ, ಆ ಲೋಕದ ಆಳದೊಳಗಿನ ಕಸವನ್ನು ಕೆದಕಿ ಅದರ ಒಂದೊಂದೇ ಪದರಿನಲ್ಲಿರುವ ವಿಶಿಷ್ಟ ವಿಷಯಗಳನ್ನು ಗುರುತಿಸುತ್ತಾ ಹೋಗುತ್ತದೆ. ಇದು ನಿಜವಾದ ದಲಿತ ಸಾಹಿತ್ಯವಾಗುತ್ತದೆ. ಒಂದು ಕಡೆ ದಲಿತಲೋಕದ ಪರಿಚಯವನ್ನು ಮಾಡಿಕೊಡುವುದು ಇನ್ನೊಂದು ಕಡೆ ದಲಿತ ಭಾವನೆಗಳ, ಅನಿಸಿಕೆಗಳ, ಆಸೆಗಳ ಆಳಕ್ಕಿಳಿದು ಅವರ ನಾಡಿ ಬಡಿತದ ಸ್ವರವನ್ನು ಮೀಟುವುದು ಕೂಡ ಮುಖ್ಯವಾದ ಕೆಲಸ.

ದಲಿತ ಸಾಹಿತ್ಯಕ್ಕೆ ಪ್ರೇರಣೆಯಾಗಿ ಪ್ರಪಂಚದ ಕಪ್ಪು ಜನರಿಂದ ರಚಿತವಾದ ಸಾಹಿತ್ಯವು ಒಂದು. ಈ ರೀತಿಯ ಪ್ರತಿಭಟನಾ ರೂಪದ ಸಾಹಿತ್ಯವನ್ನು ಇಂಡಿಯಾದ ಬೇರೆ ಬೇರೆ ಭಾಷೆಗಳಲ್ಲಿ ಕಾಣಬಹುದು. ಮುಖ್ಯವಾಗಿ ದಲಿತ ಸಾಹಿತ್ಯ ವಿಪುಲವಾಗಿ ಬೆಳೆದಿರುವುದು ಮಹಾರಾಷ್ಟ್ರದ ಮರಾಠಿ ಭಾಷೆಯಲ್ಲಿ. ಅನೇಕ ದಲಿತ ಬರಹಗಾರರು ಸಾಹಿತ್ಯ ಲೋಕಕ್ಕೆ ಉತ್ಕೃಷ್ಟ ಕೃತಿಗಳನ್ನೂ ನೀಡಿರುವಂತೆ ಸಂಖ್ಯೆಯಲ್ಲಿಯೂ ಅತಿ ಹೆಚ್ಚಿನ ಸಾಹಿತಿಗಳಿದ್ದಾರೆ. ಹಾಗೆ ನೋಡಿದರೆ ಕನ್ನಡದಲ್ಲಿ ಬಂದಿರುವ ದಲಿತ ಸಾಹಿತಿಗಳು ಕಡಿಮೆಯೆಂದೇ ಹೇಳಬೇಕು. ಕನ್ನಡದಲ್ಲಿ ದಲಿತ ಸಾಹಿತ್ಯ ಅರಳುತ್ತಿರುವ ಮೊಗ್ಗು. ಈ ಮೊಗ್ಗಿನ ವಾಸನೆಗೇ ಕನ್ನಡ ಸಾಹಿತ್ಯ ಲೋಕ ತಲ್ಲಣಗೊಂಡಿರುವುದನ್ನು ನೋಡಿದರೆ ದಲಿತ ಸಾಹಿತ್ಯದ ಪೂರ್ಣ ಸ್ವರೂಪದ ಪ್ರಭಾವವನ್ನು ಅರ್ಥ ಮಾಡಿಕೊಳ್ಳಬಹುದು. ದಲಿತ ಸಾಹಿತ್ಯಕ್ಕೆ ತನ್ನದೇ ಆದ ಧೋರಣೆಗಳಿವೆ, ಮೌಲ್ಯಗಳಿವೆ. ಬೇರೆ ಸಾಹಿತ್ಯ ಆಂದೋಲನಗಳಿಗಿರುವಂತೆ ರಭಸ, ಘೋಷಣೆಗಳಿವೆಯೆಂಬುದನ್ನು ಗುರುತಿಸಬಹುದು.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮುಖ್ಯರಾಗಿ ಕಾಣುವ ಕುವೆಂಪು,

ಗೊರೂರರ ಕೃತಿಗಳಲ್ಲಿ, ಕಾರಂತರ ಚೋಮನದುಡಿಯಲ್ಲಿ ಬರುವ ಚಿತ್ರಣ ದಲಿತ ಸಹಾನುಭೂತಿಯುಳ್ಳ, ಮಾನವೀಯತೆಯ ಕಾಳಜಿಯುಳ್ಳ ಚಿತ್ರಣ. ಆದರೆ ದಲಿತ ಸಂವೇದನೆಯುಳ್ಳ ಪಾತ್ರ ಚಿತ್ರಣಗಳಲ್ಲ. ಅನಂತಮೂರ್ತಿ, ಭೈರಪ್ಪ ಇವರಲ್ಲಿ ಸಮಸ್ಯೆಯನ್ನೆ ಮೂರ್ತೀಭವಿಸಿದ ಚಿತ್ರಣಗಳನ್ನು ಕಾಣುತ್ತೇವೆ. ಈ ದೃಷ್ಟಿಯಿಂದ ದಲಿತರಿಂದ ರಚಿತವಾದ ಕೃತಿಗಳು ಮತ್ತು ಕೃತಿ ಚಿತ್ರಣ ವನ್ನು ವಸ್ತು ನಿಷ್ಟವಾಗಿ ನೋಡಬೇಕಾಗುತ್ತದೆ. ಆಧುನಿಕ ಕನ್ನಡಸಾಹಿತ್ಯದ ಉಗಮದ ಕಾಲದಲ್ಲಿ ಕಾದಂಬರಿಯ ಮೂಲಕ ದಲಿತ ಸಾಹಿತ್ಯವನ್ನು ನೀಡಿದ ಜಿ. ವೆಂಕಟಯ್ಯ ಅಷ್ಟು ಪ್ರಸಿದ್ಧರಲ್ಲ. ಇವರ ಕೃತಿಗಳು ಕೂಡ ಹೆಚ್ಚು ಜನ ವನ್ನು ಆಕರ್ಷಿಸದೆ ಉಳಿದು, ದಲಿತ ಜೀವನ ಚಿತ್ರಣ ಮೊದಲ ಬಾರಿಗೆ ಕನ್ನಡ ಸಾಹಿತ್ಯ ಲೋಕಕ್ಕೆ ಸೇರಲ್ಪಟ್ಟವು. ನವ್ಯ ಚಳುವಳಿಯ ಪ್ರಭಾವದಿಂದ ಬರೆ ಯುತ್ತಿದ್ದ ದೇವನೂರ ಮಹಾದೇವ ಅವರು ಎರಡು ಕಥಾ ಸಂಕಲನಗಳನ್ನು ಬರೆದಿದ್ದಾರೆ. ಏಳು ಸಣ್ಣ ಕಥೆಗಳನ್ನುಳ್ಳ 'ದ್ಯಾವನೂರು' ಮತ್ತು 'ಒಡಲಾಳ' ಎಂಬ ನೀಳ್ಗತೆ ಪ್ರಕಟವಾಗಿವೆ. ಈ ಎರಡೂ ಕೃತಿಗಳೂ ಸಾಕಷ್ಟು ವಿಮರ್ಶಿ ಸಲ್ಪಟ್ಟವೆ. ಕನ್ನಡ ಸಾಹಿತ್ಯದಲ್ಲಿ ವಸ್ತುನಿಷ್ಟವಾಗಿ ದಲಿತರ ಜೀವನವನ್ನು ಕಥೆಗಳ ಮೂಲಕ ನೀಡಿದವರಲ್ಲಿ ಮಹಾದೇವ ಮೊದಲಿಗರು. ದಲಿತರ ಜೀವ ನದ ಎಲ್ಲ ಮಗ್ಗಲುಗಳನ್ನು ಚಿತ್ರಿಸಿದ್ದಾರೆಂದು ಹೇಳಲು ಸಾಧ್ಯವಾಗದಿದ್ದರೂ, ಅತ್ಯಂತ ಸಮರ್ಥವಾಗಿ ಮತ್ತು ಕಲಾತ್ಮಕವಾಗಿ ಬರೆದವರು ದೇವನೂರು. ಕಲಾತ್ಮಕತೆ (craftsmanship) ಯಲ್ಲಿ ಯಾವುದೇ ರಿಯಾಯಿತಿ ಕೇಳದ ಇವರು ಬರೆದಿರುವ ಕಥೆಗಳು ಮೇಲ್ನೋಟಕ್ಕೆ ಸಾಧಾರಣವಾಗಿ ಕಂಡರೂ ಅಂತರಂಗದಲ್ಲಿ ಪ್ರತಿಭಟನೆಯ ಮುದ್ದೆಯನ್ನು ಕಟ್ಟಿಕೊಂಡಿರುವಂಥವು. ಈ ಕಾರಣದಿಂದ ದಲಿತರ ಜೀವನದ ಯಥಾವತ್ತಾದ ಚಿತ್ರಣವೇ ಒಂದು ಪ್ರತಿ ಭಟನೆ. ಲೇಖಕ ಪ್ರಯತ್ನ ಪೂರ್ವಕವಾಗಿ ಆಕ್ರೋಶ, ಆವೇಶವನ್ನು ತರಬೇ ಕಾಗಿಲ್ಲ. ಮಹಾದೇವ ತಮ್ಮ ಕಥೆಗಳಲ್ಲಿ ಈ ರೀತಿಯ ಭಾವಾವೇಶಗಳಿಗೊಳ ಗಾಗದೆ ಸಹನೆ ಮೀರಿದ ಸಂಯಮ ತಾಳಿದ್ದಾರೆ. "ಒಡಲಾಳ"ದ ಸಾಕವ್ವ ಕಳೆದುಕೊಂಡ 'ಕೋಳಿ ಹುಂಜ' ದಲಿತ ಲೋಕದ ಸೋಲಿನ ಪ್ರತಿಮೆಯಾಗಿದೆ. ಅದಕ್ಕಾಗಿ ಅವಳ ಹುಡುಕಾಟ, ಅವಳ ಪಾತ್ರದ ಒಟ್ಟೊಟ್ಟಿಗೆ ಬರುವ ಮಕ್ಕಳು ಮತ್ತು ಬಂಡವಾಳಶಾಹಿ ಸಮಾಜದ ಆಸ್ತಿಯ ಕಲ್ಪನೆಯ ಚಿತ್ರಣವಿದೆ. ವ್ಯಂಗ್ಯ ಮತ್ತು ಮಾತಿನ ಧಾಟಿ ನೇರವಾಗಿ ತಿವಿಯುವಂತಿದ್ದರೂ ಬದುಕಿಗಾಗಿ ಕಳ್ಳತನ ಮಾಡುವ ಅನಿವಾರ್ಯತೆ, ಜಗಳದಲ್ಲೂ ಒಂದಾಗುವ ಜೀವನ ಅಚ್ಚುಕಟ್ಟಾಗಿ ಕಾಣುತ್ತೇವೆ. ಕನ್ನಡದ ಉತ್ತಮ ಕಥೆಗಳಲ್ಲಿ ಒಂದಾದ 'ಒಡಲಾಳ' ದಲಿತ ಬದುಕಿನ ಚಿತ್ರಕೊಡುವ ಅಪೂರ್ವ 'ಕಲಾಕೃತಿ'. ಮಹದೇವ ಅವರು ತಮ್ಮ ಅನುಭವ ಪ್ರಪಂಚದ ಆಚೆಗೆ ಬಂದು ಕೃತಿ ರಚನೆಯಲ್ಲಿ

ತೊಡಗಿಸಿಕೊಳ್ಳಲು ಸಾಧ್ಯವಾಗಿಲ್ಲ. ಇವರು ಬರೆಯಬೇಕಾದ್ದು ಸಾಕಷ್ಟಿದೆ. ನಾವು ಇನ್ನೂ ಅವರಿಂದ ನಿರೀಕ್ಷಿಸಬಹುದೇನೋ.

ಸಾಹಿತ್ಯದ ಅತ್ಯಂತ ಸೂಕ್ಷ್ಮ ಪ್ರಕಾರವಾದ ಕಾವ್ಯವನ್ನು ತಮ್ಮ ಅಭಿವ್ಯಕ್ತಿಯ ಮಾಧ್ಯಮವಾಗಿ ಮಾಡಿಕೊಂಡಿರುವ ಸಿದ್ಧಲಿಂಗಯ್ಯನವರನ್ನು ಪ್ರಮುಖವಾಗಿ ಗಮನಿಸಬಹುದು. 'ಹೊಲೆ–ಮಾದಿಗರ ಹಾಡು' ಕವನ ಸಂಕಲನದಿಂದ ತಮ್ಮೆಲ್ಲ ಆವೇಶ ಆರ್ಭಟದಿಂದ ಗುಡುಗಿದ ಇವರು ದಲಿತ ಕಾವ್ಯದ ರುಚಿಯನ್ನು ಮೊಟ್ಟಮೊದಲಿಗೆ ಕನ್ನಡ ಸಾಹಿತ್ಯಕ್ಕೆ ಉಣಿಸಿದರು. ಇಲ್ಲಿಯವರೆಗೆ ಮೂರು ಕವನ ಸಂಕಲನ, ಒಂದು ನಾಟಕ ಮತ್ತು ಒಂದು ಪ್ರಬಂಧ ಸಂಕಲನವನ್ನು ಬರೆದಿರುವ ಸಿದ್ಧಲಿಂಗಯ್ಯನವರೇ ಕನ್ನಡ ದಲಿತ ಸಾಹಿತ್ಯದಲ್ಲಿ ಹೆಚ್ಚು ಕೃತಿಗಳನ್ನು ಬರೆದಿದ್ದಾರೆ. ಅಷ್ಟೇ ಸತ್ವಶಾಲೀ ಕವಿತೆಗಳನ್ನು ಬರೆದು ಕ್ರಾಂತಿಕವಿಯೆನಿಸಿಕೊಂಡವರು. ಕರ್ನಾಟಕದಲ್ಲಿ ದಲಿತ ಚಳುವಳಿಯ ಪ್ರಮುಖರೂ ಆಗಿದ್ದ ಇವರು ಮಾರ್ಕ್ಸ್‌ವಾದದಿಂದ ದಲಿತ ವಿಮೋಚನೆಯನ್ನು ಕಾಣಲು ಬಯಸಿದರು. ಆ ದೃಷ್ಟಿಯಿಂದಲೇ ಕಾವ್ಯರಚನೆಯಲ್ಲಿ ತೊಡಗಿದವರು. 'ಇಕ್ರಲಾ ವದಿಲ್ರಾ, ಈ ನನ್ಮಕ್ಕಳಾ ಚರ್ಮ ಎಬ್ರಲಾ' ಎಂಬ ಘೋಷಣೆಯಿಂದ ದಲಿತ ಸಾಹಿತ್ಯಕ್ಕೆ ಪ್ರವೇಶಿಸಿದ ಇವರು "ಸಾವಿರಾರು ನದಿಗಳು" ಸಂಕಲನದಲ್ಲಿ ಕಲಾತ್ಮಕ ಚಿತ್ರಣಗಳನ್ನು ಕೊಟ್ಟವರು. ದಲಿತ ಸಂವೇದನೆಯ ವಿವಿಧ ಭಾವನೆಗಳನ್ನು ಕಾವ್ಯದ ಮೂಲಕ ವ್ಯಕ್ತಪಡಿಸಿರುವ ಇವರ ಪ್ರೀತಿ, ಪ್ರೇಮವನ್ನು ಕುರಿತ ಅನೇಕ ಕವಿತೆಗಳನ್ನು ಅವರ ಮೂರನೆ ಸಂಕಲನ "ಕಪ್ಪು ಕಾಡಿನ ಹಾಡು"ವಿನಲ್ಲಿ ಕಾಣುತ್ತೇವೆ. ಇದರ ವಿಶೇಷವೆಂದರೆ ದಲಿತ ಪ್ರೇಮದ ಅನುಭವ ಕೂಡ ವಿಶಿಷ್ಟವಾಗಿರಬಲ್ಲುದು ಎಂಬುದಕ್ಕೆ 'ಸುಟ್ಟಾವು ಬೆಳ್ಳಿಕಿರಣ' ಕವಿತೆ ಸಾಕ್ಷಿ. ಇಂಡಿಯಾದ ಮಾರ್ಕ್ಸ್‌ವಾದಿಗಳಿಂದ ಭಿನ್ನವಾಗಿ ದಲಿತ ದೃಷ್ಟಿಯಿಂದ ಆಲೋಚಿಸುವ ಸಿದ್ಧಲಿಂಗಯ್ಯನವರು ಈ ದೇಶದ ಬಂಡವಾಳಶಾಹಿ ಮತ್ತು ಜಮೀನ್ದಾರಿ ಪದ್ಧತಿ ನಾಶವಾದರೆ ಸಾಲದು ಹಿಂದುಧರ್ಮ ಕೂಡ ನಾಶವಾಗಬೇಕು ಆ ಮೂಲಕ ಜಾತಿಪದ್ಧತಿ ನಿರ್ನಾಮವಾಗಬೇಕೆಂದು ಬಯಸಿದರು.

> 'ಹಿಂದು ಧರ್ಮವ ಕೊಂದರು ದಲಿತರು
> ಜಮೀನುದಾರರ ಬಿಡಲಿಲ್ಲ
> ಯಾರಿಗು ಸದರವ ಕೊಡಲಿಲ್ಲ'

ಅವರ ಕವಿತೆಯೊಂದರ ಈ ಸಾಲುಗಳನ್ನು ನೋಡಬಹುದು. 'ಪಂಚಮ ಮತ್ತು ನೆಲಸಮ' ಎಂಬ ನಾಟಕಗಳನ್ನು ಬರೆದಿರುವ ಇವರು "ಅವತಾರಗಳು" ಎಂಬ ಪ್ರಬಂಧ ಸಂಕಲನವನ್ನು ಹೊರತಂದಿದ್ದಾರೆ. ಹಿಂದು ಮೌಲ್ಯಗಳಲ್ಲಿ

ಮುಖ್ಯವಾದ ದೇವರಿಗೆ ಸಂಬಂಧಿಸಿದ ಅನೇಕ ಘಟನೆಗಳನ್ನು ಬರೆಯುವುದರ ಮೂಲಕ ಗೇಲಿ ಎಬ್ಬಿಸಿ ಓದುಗನ ಮೆಚ್ಚುಗೆ ಪಡೆಯುವ ಜೊತೆಗೆ ದೇವರ ಬಗ್ಗೆ ಅವನಿಗಿರುವ ಭಕ್ತಿಯನ್ನು ಸಡಿಲಗೊಳಿಸಲು ಈ ಕೃತಿ ನೆರವಾಗುತ್ತದೆ. ಬಹುಶಃ ದಲಿತ ಸಾಹಿತ್ಯ ಈ ರೀತಿಯ ವಿವಿಧ ಪ್ರಕಾರಗಳಿಂದ ತನ್ನ ಅಸ್ತಿತ್ವವನ್ನು ಹುಡುಕಿಕೊಳ್ಳುವುದು ಒಳ್ಳೆಯದು. ಕಾವ್ಯವನ್ನೇ ಪ್ರಕಾರವನ್ನಾಗಿ ಮಾಡಿಕೊಂಡಿದ್ದ ಇವರಿಂದ ಕನ್ನಡ ಸಾಹಿತ್ಯದಲ್ಲೇ ವಿಶಿಷ್ಟವಾದ ಹೊಸ ಪ್ರಯೋಗಗಳನ್ನು ನಿರೀಕ್ಷಿಸಿದ್ದವರು, ಇವರ ಮುಂದಿನ ಸಂಕಲನಗಳನ್ನು ಕಾದು ನೋಡಬೇಕಾಗಿದೆ.

ಮಹದೇವ ಅವರಂತೆ ಸಿದ್ಧಲಿಂಗಯ್ಯನವರ ಸಾಹಿತ್ಯ ಕೂಡ ಬಹಳ ಚರ್ಚೆಗೊಳಗಾಯಿತು. ವಿಮರ್ಶೆ ಕೆಲವು ಸಾರಿ ಕೃತಿಗಳ ಗಟ್ಟಿತನಕ್ಕಿಂತಲೂ ಹೆಚ್ಚಾಗಿ ಹೊಗಳಿಕೆಯಾಗಿರುವುದನ್ನೂ ಕಾಣಬಹುದು. ಕೆಲವು ಪ್ರತಿಷ್ಠಿತ ವಿಮರ್ಶಕರು ಕಥೆಗಾರರಾದ ಮಹದೇವರನ್ನು ಕವಿ ಸಿದ್ಧಲಿಂಗಯ್ಯನವರನ್ನು ಒಂದೇ ಮೂಲಮಾನದಿಂದ ವಿಮರ್ಶಿಸಿರುವುದನ್ನು ನೋಡಿದರೆ ಇಬ್ಬರಿಗೂ ಅನ್ಯಾಯ ಮಾಡಿದ್ದಾರೆ. ಇವರಿಬ್ಬರೂ ದಲಿತ ಸಾಹಿತ್ಯದ ಪ್ರಮುಖ ಬರಹಗಾರರಾದ್ದರಿಂದ ಕೆಲವು ವಿಚಾರಗಳಲ್ಲಿ ಮಾತ್ರ ಜೊತೆಯಾಗಿಟ್ಟು ನೋಡುವುದು ಆರೋಗ್ಯಕರ. ಸಿದ್ಧಲಿಂಗಯ್ಯನವರನ್ನು ಅರ್ಭಟದ ಆಕ್ರೋಶದ ಕವಿ ಎಂದಿದ್ದಾರೆ. ಆದರೆ ಮಹದೇವರ ಕಥಾ ಚಿತ್ರಣ ತಣ್ಣನೆಯದು ಎನ್ನುತ್ತಾರೆ. ಅತ್ಯಂತ ಪ್ರೌಢಿಮೆಯ ಕಲಾತ್ಮಕತೆಯನ್ನು ಉಳಿಸಿಕೊಂಡ ಮಹದೇವ ಅವರು ಜನಪ್ರಿಯ ಕಥೆಗಾರರಲ್ಲ. ಅಂದರೆ ಬಹುಸಂಖ್ಯಾತ ದಲಿತರನ್ನು ತಲುಪಲು ಸಾಧ್ಯವಾಗಿಲ್ಲ. ಸಾಹಿತ್ಯದ ವಿದ್ಯಾರ್ಥಿಗಳ ಹೊರತು ಇವರ ಕಥೆಗಳು ಹೊರಗಿನವರನ್ನು ಚರ್ಚೆಗೆ ಚಿಂತೆಗೆ ಈಡುಮಾಡಿಲ್ಲ. ಸಿದ್ಧಲಿಂಗಯ್ಯ ಈ ವಿಷಯದಲ್ಲಿ ಜನಪ್ರಿಯ ಕವಿ ಅಲ್ಲದೆ ಸಮಾಜದ ಬಹುಸಂಖ್ಯಾತರನ್ನು ನೇರವಾಗಿ ತಲುಪಿದವರು. ಇವರ ಕವನಗಳನ್ನು ಕೇಳಿದ, ಹಾಡಿದ ಅನೇಕ ಜನ ತಮ್ಮನ್ನೇ ತೊಡಗಿಸಿಕೊಂಡಿರುವುದು ಕಾಣಬಹುದು. ಕಲಾತ್ಮಕತೆಯನ್ನು ಉಳಿಸಿಕೊಂಡು ಬಹು ಸಂಖ್ಯಾತರನ್ನು ತಲುಪುವುದು ದಲಿತ ಸಾಹಿತ್ಯದ ಒಂದು ಪ್ರಮುಖ ಲಕ್ಷಣವೆನ್ನಬಹುದು. ಈ ದೃಷ್ಟಿಯಿಂದ ಸಿದ್ಧಲಿಂಗಯ್ಯ ಹೆಚ್ಚು ಜನರನ್ನು ತಲುಪಿದ ಕವಿ, ದಲಿತರ ಜೀವನದ ನೇರ ಚಿತ್ರ ಕೊಟ್ಟವರು ಮಹಾದೇವ. ದಲಿತರ ನಡೆ–ನುಡಿ, ಸುಖ–ದುಃಖ, ಇವು ಕಣ್ಣಿಗೆ ಕಟ್ಟುವಂತೆ ಮಾಡಿದ್ದಾರೆ. ಸಿದ್ಧಲಿಂಗಯ್ಯ ದಲಿತ ಮನಸ್ಸಿನ ಸಂವೇದನೆಯಾದ ಆಕ್ರೋಶ ಸಿಟ್ಟನ್ನು ಹೊರಗೆಡಹಿದವರು. ಒಂದು ರೀತಿಯಲ್ಲಿ, ಇಬ್ಬರೂ ಒಂದೇ ರೀತಿಯ ಕೆಲಸವನ್ನು ಬೇರೆಬೇರೆ ಸ್ತರದಲ್ಲಿ ಮಾಡಿದವರು ಎನ್ನಬಹುದು.

ಕವಿಗಳ ಸಾಲಿನಲ್ಲಿ ನಿಲ್ಲುವ ಇಂದೂಧರ ಹೊನ್ನಾಪುರ 'ಬಂಡಾಯ' ಕವನ ಸಂಕಲನ ತಂದಿದ್ದಾರೆ. ದಲಿತರ ಶೋಷಣೆ, ಜೀವನವನ್ನೇ ಹೇಳಲು ಹೊರಟ ಇವರ ಸಂಕಲನದ ಕೆಲವು ಪದ್ಯಗಳೇ ಅದರ ಒಟ್ಟು ಆಶಯವನ್ನು ಹೇಳಿ ಬಿಡುತ್ತದೆ. 'ಕಪ್ಪು ಮನುಜರು' ಎಂಬ ಉತ್ತಮ ಕವನದೊಂದಿಗೆ ಘೋಷಣೆ ಗಳ ತರದ ಕೆಲವು ಪದ್ಯಗಳೂ ಸೇರಿವೆ. ಇವರ ಮುಂದಿನ ಸಂಕಲನವೇನಾದರೂ ಈ ಮಾತುಗಳಿಗೆ ಅಪವಾದವಾದರೆ ಉತ್ತಮ.

ಕೆಲವು ಕವನಗಳನ್ನು ಮಾತ್ರ ಬರೆದು ಸಂಕಲನವಾಗಿ ಅಚ್ಚು ಮಾಡಿಸದೆ ಇರುವ ಕವಿಗಳೆಂದರೆ ರಾಮದೇವ ರಾಕೆ, ಗೋವಿಂದಯ್ಯ, ಕೆ. ರಾಮಯ್ಯ. ಮೇಲಿನ ಸೂತ್ರವನ್ನೇ ಅಳವಡಿಸಿಕೊಂಡು ವಸ್ತು ಕೂಡ ಒಂದೇ ಆದರೂ ಇವರ ಅಭಿವ್ಯಕ್ತಿಯಲ್ಲಿ ಬದಲಾವಣೆ ಕಾಣುತ್ತೇವೆ. ನವ್ಯರ ಪ್ರಭಾವದಿಂದಲೇ ಬರೆದ ಗೋವಿಂದಯ್ಯ ಮತ್ತು ರಾಕೆ ಬಂಡಾಯದಿಂದ ಮುಂದೆ ಪದಗಳನ್ನು ಬರೆದ ರಾಮಯ್ಯ ಇವರ ನಡುವೆ ಸಾಮ್ಯತೆಯನ್ನು ಕಾಣಲಾಗುವುದಿಲ್ಲ. ಇವರೆಲ್ಲ ದಲಿತಕಾವ್ಯದ ಚೌಕಟ್ಟಿನಲ್ಲೇ ಬರುವಂಥವರು.

ಬಂಡಾಯ ಸಾಹಿತ್ಯ ಚಳುವಳಿಯ ಪ್ರೇರಣೆಯಿಂದ ಹುಟ್ಟಿದ ದಲಿತ ಕವಿ ವಿ. ಮುನಿವೆಂಕಟಪ್ಪನವರ 'ಕೆಂಡದ ನಡುವೆ' ಕಾವ್ಯದ ಮುಖ್ಯ ಸೆಲೆ ಜಾತಿಯ ಅಸಮಾನತೆ, ಮತ್ತು ಅವಮಾನ. ಕೆಂಡದ ನಡುವೆ ಸಂಕಲನದಲ್ಲಿ ಮುನಿವೆಂಕಟಪ್ಪ ನವರು ಕೆಲವು ರಾಜಕೀಯಕ್ಕೆ ಸಂಬಂಧಿಸಿದ ಕವನಗಳನ್ನು ಬರೆದರೂ ಇವು ಸೈದ್ಧಾಂತಿಕ ರಾಜಕೀಯ ಚಿಂತನೆಗೆ ಹಚ್ಚದೆ, ಜಾಳು ಜಾಳಾದ ಘಟನೆಗಳನ್ನು ಕುರಿತಂತಾಗಿದ್ದು ಕವನಗಳು ಗಟ್ಟಿ ಎನಿಸುವುದಿಲ್ಲ. ಜಾತಿಯ ಅಸಮಾನತೆ ಯನ್ನು ಕುರಿತು ಬರೆದಿರುವ ಕೆಲವು ಕವನಗಳು ದಲಿತ ಕವಿಯೊಬ್ಬನ ಮಾನಸಿಕ ದ್ವಂದ್ವವನ್ನು ಪ್ರಚುರ ಪಡಿಸುತ್ತದೆ.

ಒಟ್ಟಾರೆ ಕನ್ನಡ ಸಾಹಿತ್ಯದಲ್ಲಿ ದಲಿತ ಸಾಹಿತ್ಯಕ್ಕೆ ವಿಶಿಷ್ಟ ಸ್ಥಾನವಿದೆ. ಇದು ಬಂಡಾಯ ಸಾಹಿತ್ಯ ಚಳುವಳಿಯ ಪರಿಧಿಯ ಒಳಗಡೆ ಎಂಬುದಕ್ಕೆ ಎರಡು ಮಾತಿಲ್ಲ. ಆದರೂ ಸಾಹಿತ್ಯದ ಆನೇಕ ಪ್ರಕಾರಗಳನ್ನು ಬಳಸಿಕೊಂಡು ಸಂಖ್ಯೆ ಯಲ್ಲಿ ಮತ್ತು ಸತ್ವದಲ್ಲಿ ಗಮನಾರ್ಹ ಕೃತಿಗಳನ್ನು ನೀಡಿಲ್ಲ. ಮಹಾರಾಷ್ಟ್ರದ ದಲಿತ ಸಾಹಿತ್ಯ ನೋಡಿದರೆ ಆಶ್ಚರ್ಯವಾಗುತ್ತದೆ. ಇನ್ನು ಮುಂದೆ ಹೆಚ್ಚು ದಲಿತ ಬರಹಗಾರರನ್ನು ಕಾದಂಬರಿ, ನಾಟಕ, ಕಥನ ಕಾವ್ಯ ವಿವಿಧ ರೂಪಗಳಲ್ಲಿ ಬರೆಯುವವರನ್ನು ಪ್ರೋತ್ಸಾಹಿಸುವುದು ಮತ್ತು ಪ್ರೇರಣೆಯಾಗುವುದು ಬಂಡಾಯ ಸಾಹಿತ್ಯ ಸಂಘಟನೆಯಂಥ ಚಳುವಳಿಗಳ ಜವಾಬ್ದಾರಿಯಾಗಬೇಕು. ಆಗ ದಲಿತ ಸಾಹಿತ್ಯ ಒಂದು ಪ್ರಮುಖ ಭಾಗವಾಗಿ ಕನ್ನಡ ಸಾಹಿತ್ಯದಲ್ಲಿ ಬೆಳೆಯುತ್ತದೆ.

## ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗೆ ವ್ಯಾಪಕ ಕಾರ್ಯಕ್ರಮ

ಕರ್ನಾಟಕದಲ್ಲಿ ಸಣ್ಣ ಕೈಗಾರಿಕೆ, ಗುಡಿ ಕೈಗಾರಿಕೆ, ಕೈಮಗ್ಗ, ಮತ್ತು ಕರಕುಶಲ ಕೈಗಾರಿಕೋದ್ಯಮಗಳ ಅಭಿವೃದ್ಧಿಗಾಗಿ ಹೊಸ ಉತ್ತೇಜಕ ವಾತಾವರಣ ಕಲ್ಪಿತವಾಗಿದೆ.

1984–85ನೇ ಸಾಲಿಗಾಗಿ ಸಣ್ಣ ಹಾಗೂ ಗೃಹ ಕೈಗಾರಿಕೆಗಳ ಅಭಿವೃದ್ಧಿ ಸಾಧಿಸಲು ಅನೇಕ ಆಶಾದಾಯಕವಾದ ಹೊಸ ಯೋಜನೆಗಳನ್ನು ರೂಪಿಸಲಾಗಿದೆ.

ಈ ಯೋಜನೆಗಳು, ಆಸಕ್ತ ಕೈಗಾರಿಕೋದ್ಯಮಿಗಳಿಗೆ ಆರ್ಥಿಕ ಸಹಾಯ ಮತ್ತು ತಾಂತ್ರಿಕ ಜ್ಞಾನವನ್ನು ಸಹ ಒದಗಿಸುತ್ತವೆ.

ಈ ಯೋಜನೆಗಳು :

1. 1985 ನೇ ಡಿಸೆಂಬರ್ ತಿಂಗಳ ವೇಳೆಗೆ 36 ಕೋಟಿ ರೂ. ವೆಚ್ಚದಲ್ಲಿ 1510 ಕೈಗಾರಿಕಾ ಷೆಡ್ಡುಗಳನ್ನು ನಿರ್ಮಿಸಲಾಗುವುದು. ಕಳೆದ 20 ವರ್ಷಗಳಲ್ಲಿ 120 ಕೋಟಿ ರೂ. ವೆಚ್ಚದಲ್ಲಿ 2000 ಕೈಗಾರಿಕಾ ಷೆಡ್ಡುಗಳನ್ನು ಮಾತ್ರ ನಿರ್ಮಿಸಲಾಗಿತ್ತು.
2. ಔಷಧಿಗಳು, ಚರ್ಮ ಮತ್ತು ಕೈಗಾರಿಕಾ ಸಲಕರಣೆಗಳು. ಮುಂತಾದವುಗಳಿಗೆ ಸಕ್ರೀಯ ಕೈಗಾರಿಕಾ ಎಸ್ಟೇಟುಗಳನ್ನು ಸ್ಥಾಪಿಸಲಾಗುವುದು.
3. ಸಣ್ಣ ಕೈಗಾರಿಕೆಗಳ ಮಾರಾಟ ನಿಗಮದ ನಿರ್ಮಾಣ.
4. ಕೈಮಗ್ಗ ತಾಂತ್ರಿಕ ಸಂಸ್ಥೆಯ ಸ್ಥಾಪನೆ.
5. ರಾಜ್ಯದ ನಾರು ಅಭಿವೃದ್ಧಿ ನಿಗಮದ ಸ್ಥಾಪನೆ.
6. ಪ್ರಾಥಮಿಕ ಸಹಕಾರಿ ಕೈಮಗ್ಗ ಸಂಘಗಳ ಎಲ್ಲ ನೇಕಾರ ಸದಸ್ಯರುಗಳಿಗೂ ಈಗ ಅನ್ವಯವಾಗುತ್ತಿರುವ ಉಳಿತಾಯ ಕಾಣಿಕೆ ನಿಧಿ ಯೋಜನೆಯನ್ನು (contributory thrift fund scheme) ಕೈಗಾರಿಕಾ ಅಭಿವೃದ್ಧಿ ನಿಗಮಕ್ಕೆ ವಿಸ್ತರಿಸುವುದು.
7. ಚರ್ಮ ತಾಂತ್ರಿಕ ಸಂಸ್ಥೆಯ ಸ್ಥಾಪನೆ.
8. ವಿದೇಶಗಳಲ್ಲಿ ವಾಸಿಸುತ್ತಿರುವ ಭಾರತೀಯರಿಗಾಗಿಯೇ ಪ್ರತ್ಯೇಕವಾಗಿ ಕೈಗಾರಿಕಾ ವಲಯಗಳ ಅಭಿವೃದ್ಧಿ.

**ಕರ್ನಾಟಕ ವಾರ್ತೆ.**

# ಗೌರಿ

---

ಮೂಲ : **ಪುರಾಣಂ ಸುಬ್ರಮಣ್ಯಶರ್ಮ**

ಅನು : **ನಗರಗೆರೆ ರಮೇಶ್**

## ಪ್ರಾಚೀನ ಅರಣ್ಯವಾಸೀ ಸಮಾಜದಲ್ಲಿನ ಮಾತೃಪ್ರಾಧಾನ್ಯತೆ :

ನಾಗರಿಕ ಸಮಾಜವು ಅರಣ್ಯವಾಸೀ ಸಮಾಜದಿಂದ ಹುಟ್ಟಿದ್ದು. ಸಾಮಾಜಿಕ ಜೀವನದಲ್ಲಿನ ಒಂದೊಂದು ಬದಲಾವಣೆಯೂ ಒಂದೊಂದು ಮುಖ್ಯ ಪರಿಣಾಮಕ್ಕೆ ದಾರಿ ಮಾಡಿಕೊಟ್ಟಿತು. ಇಂದಿನ ಸಮಾಜ ಪ್ರಸ್ತುತ ಸ್ಥಿತಿಯನ್ನು ತಲುಪಲು ಹಲವು ಸಾವಿರ ವರ್ಷಗಳ ಕಾಲ ಹಿಡಿಯಿತೆಂಬುದು ಆಶ್ಚರ್ಯದ ಸಂಗತಿ ಯಾದರೂ ನಿಜ. ಮುಖ್ಯವಾಗಿ ಕುಟುಂಬ ವ್ಯವಸ್ಥೆ ಮೊದಲಿಗೆ ಈಗಿನ ಸ್ಥಿತಿ ಯಂತಿರಲಿಲ್ಲ. ಇಂದು ನಾವು ಕಾಣುವ ಸಂಬಂಧಗಳು ಆ ಕಾಲದಲ್ಲಿರಲಿಲ್ಲ. ಈ ವಿವರಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾದರೆ ನಮ್ಮ ಸಮಾಜದ ಪೂರ್ವೇತಿಹಾಸವನ್ನು ತಿಳಿಯುವುದು ಅಗತ್ಯ.

ಅರಳಿಮರಕ್ಕೂ ಬೇವಿನಮರಕ್ಕೂ ಮದುವೆ ಮಾಡುವ ಪದ್ಧತಿ ನಮ್ಮಲ್ಲಿದೆ. ನಾಗರಪಂಚಮಿಯಂದು ಹುತ್ತದಲ್ಲಿ ಹಾಲನ್ನು ಸುರಿಯುತ್ತಾರೆ. ಸಂಕ್ರಾಂತಿಯಂದು ರೈತರು ಗೋಪೂಜೆ ಮಾಡಿ ನೊಗವನ್ನು ಶುಭ್ರಮಾಡಿ, ಎತ್ತುಗಳನ್ನು ಅಲಂಕರಿಸಿ ವಿಜೃಂಭಣೆಯಿಂದ ಹಬ್ಬವನ್ನು ಆಚರಿಸುತ್ತಾರೆ. ಇವಲ್ಲದೆ ಇನ್ನೂ ಹಲವು ವ್ರತ ಗಳನ್ನು ನಮ್ಮ ಹೆಂಗಸರು ಮಾಡುತ್ತಾರೆ. ಆದರೆ ಇಷ್ಟೆಲ್ಲಾ ಹಬ್ಬಗಳ ಹಿಂದಿನ ಅರ್ಥದ ಬಗ್ಗೆ ನಾವೆಂದೂ ಯೋಚಿಸುವುದಿಲ್ಲ. ಆ ರೀತಿ ಯೋಚನೆ ಮಾಡುವುದು, ಪ್ರಶ್ನಿಸುವುದು ಮಹಾಪರಾಧ. ಪ್ರಶ್ನಿಸದಿದ್ದುದರಿಂದ ಈ ಆಚಾರಗಳು ನಮ್ಮ ಮೇಲೆ ಒಂದು ದೊಡ್ಡ ಭಾರವಾಗಿ ಉಳಿದುಬಿಟ್ಟಿವೆ. ಅವುಗಳಿಂದ ಹೇಗೆ ಬಿಡಿಸಿ ಕೊಳ್ಳಬೇಕೆನ್ನುವುದು ಬೇರೆಯೇ ಆದಂತಹ ವಿಷಯ.

ಈಗಿನ ಪ್ರಶ್ನೆಯೆಂದರೆ ಈ ಹಬ್ಬಗಳ ಹಿನ್ನೆಲೆಯಲ್ಲಿರುವ ಅಂಶಗಳೇನು? ಪ್ರಾಚೀನ ಭಾರತ ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನಗಳು, ಹಕ್ಕು ಬಾಧ್ಯತೆಗಳು ಯಾವ ರೀತಿಯವು? ಮತ್ತು ಯಾವ ರೀತಿಯಲ್ಲಿ ಸಾಮಾಜಿಕವಾಗಿ ಸ್ತ್ರೀಯರ ಸ್ಥಿತಿಗತಿಗಳು ಬದಲಾದವು?—ಎಂಬುದು. ಈ ಪ್ರಶ್ನೆಗಳಿಗೆ ಉತ್ತರ ತಿಳಿಯಬೇಕೆಂದರೆ ಅರಣ್ಯವಾಸೀ ಜನಾಂಗದಲ್ಲಿ ಪ್ರಚಲಿತವಾಗಿದ್ದ ಮಾತೃಪ್ರಧಾನ ವ್ಯವಸ್ಥೆಯನ್ನು ಅರ್ಥಮಾಡಿಕೊಳ್ಳಬೇಕು. ಹಾಗಾದಾಗ ಮಾತ್ರ ಲೋಕಾಯತ ತತ್ವವಾಗಲೀ ಅದರ ಮುಖ್ಯಾಂಶಗಳಾದ ಸಾಂಖ್ಯ ತಂತ್ರಗಳಾಗಲೀ ಮನದಟ್ಟಾಗುವುದು ಸಾಧ್ಯ.

ಪ್ರಕೃತಿಯೆಂದರೆ ಸ್ತ್ರೀ. ಸ್ತ್ರೀಯೆ ಈ ಸೃಷ್ಟಿಯ ಮೂಲ, ಆದ್ದರಿಂದಲೇ ಸಾಂಖ್ಯ ತಂತ್ರಗಳಲ್ಲಿ ಸ್ತ್ರೀ ರೂಪಕ ಪ್ರಕೃತಿಯನ್ನು ಪೂಜಿಸುವುದುಂಟು. ಸೃಷ್ಟಿಯ ಮೂಲ ಸ್ತ್ರೀ ಎಂಬ ನಿಸರ್ಗವಾದ ಒಂದು ಸಹಜ ಬೆಳವಣಿಗೆ. ಆದರೆ ಇದು ಸ್ತ್ರೀಯ ಆಧಿಕ್ಯತೆಯನ್ನು ಸೂಚಿಸುವ ಒಂದು ತಾತ್ವಿಕ ಅಂಶ ಮಾತ್ರ. ಮಾತೃಪ್ರಧಾನ ಸಮಾಜ ಬೆಳೆಯಲು ಕಾರಣವಾದ ಭೌತಿಕ ಅಂಶಗಳನ್ನು ತಿಳಿಯೋಣ.

ಕೃಷಿಯನ್ನು ಕಂಡು ಹಿಡಿದದ್ದು ಸ್ತ್ರೀಯರು. ಮೊದಲಿಗೆ ಅವರು ಬಾರ್ಲಿ, ಅಕ್ಕಿಯನ್ನು ಬೆಳೆದರು. ಪುರುಷರು ಬೇಟೆಯಾಡಲು ಹೋದಾಗ ಸಿಕ್ಕ ಬಿಡುವಿನ ವೇಳೆಯಲ್ಲಿ ಸ್ತ್ರೀಯರು ಕೃಷಿಯನ್ನು ಕೈಗೆತ್ತಿಕೊಂಡರು. ಆದ್ದರಿಂದಲೇ ಸಾಮಾಜಿಕವಾಗಿಯೂ ಸ್ತ್ರೀಯರು ಪ್ರಾಮುಖ್ಯತೆಯನ್ನು ಸಂಪಾದಿಸಿದರು. ಭಾರತೀಯ ಆಧ್ಯಾತ್ಮ ಚಿಂತನೆಯಲ್ಲಿಯೂ ಸ್ತ್ರೀಗೆ ಮಾತೃ ಮೂರ್ತಿಯಾಗಿ ಹೆಚ್ಚು ಗೌರವ ಉಂಟು. ಲೋಕಾಯತವು ಪ್ರಕೃತಿಯ ಹೆಸರಿನಲ್ಲಿ ಸ್ತ್ರೀಯ ಪ್ರಾಧಾನ್ಯತೆಯನ್ನು ಸಮರ್ಥಿಸುತ್ತದೆ. ಆದರೆ ವೈದಿಕ ಸಮಾಜಕ್ಕೆ ಕೃಷಿಯು ಗೊತ್ತಿರಲಿಲ್ಲ. ಅವರು ಮುಖ್ಯವಾಗಿ ಪಶುಪೋಷಕರು. ಪಶುಗಳೇ ಅವರ ಆಸ್ತಿ. ವೇದಕಾಲದ ಜನರ ದೃಕ್ಪಥ ಪುರುಷ ಪ್ರಧಾನವಾದುದರಿಂದ ವೈದಿಕ ಧರ್ಮವೂ ಸಹ ಪುರುಷ ಪ್ರಧಾನವಾಯಿತು.

**ಕೃಷಿ ಮತ್ತು ಪುರುಷ ಪ್ರಾಮುಖ್ಯತೆಯ ಅಂತ್ಯ :**

ಭಾರತದಲ್ಲಿನ ವಿವಿಧ ಪ್ರದೇಶಗಳಲ್ಲಿ ವಿನಾಯಕನ ಹಬ್ಬವನ್ನು ವಿವಿಧ ರೀತಿಗಳಲ್ಲಿ ಆಚರಿಸುತ್ತಾರೆ. ಕೆಲವು ಪ್ರಾಂತ್ಯಗಳಲ್ಲಿನ ಈ ಆಚರಣೆ ಗಂಡುದೇವರಿಂದ ಶುರುವಾಗಿ ಹೆಣ್ಣು ದೇವತೆಯ ಪ್ರಾಮುಖ್ಯತೆಯಲ್ಲಿ ಮುಗಿಯುತ್ತದೆ. ಕೆಲವು ಕಡೆ ಗಣೇಶನನ್ನು ಸ್ತ್ರೀ ಮೂರ್ತಿಯೆಂಬ ಭಾವನೆಯಿಂದ ಪೂಜಿಸುತ್ತಾರೆ.

ಇನ್ನೂ ಕೆಲವೆಡೆ ಭಾದ್ರಪದ ಮಾಸದಲ್ಲಿ ಈ ಹಬ್ಬವನ್ನು ಹಲವು ದಿನ ನಡೆಸುತ್ತಾರೆ. ಕೆಲವು ಅಭಿವೃದ್ಧಿ ಹೊಂದದ ಪ್ರಾಂತ್ಯಗಳಲ್ಲಿ ಗಣೇಶನನ್ನು ಕೇವಲ ಬೀಜಬಿತ್ತುವ ಕಾಲದ ಹೊಸ ಚಂದ್ರನ ಸಂಕೇತವಾಗಿ ಗ್ರಹಿಸುತ್ತಾರೆ. ಇನ್ನೂ ಕೆಲವು ಕಡೆ ಎರಡನೆಯ ದಿನದಂದು ಗಣೇಶನ ಸ್ಥಾನವನ್ನು ಗೌರಿ ಆಕ್ರಮಿಸಿ ಅಂದಿನಿಂದ ಹಬ್ಬದಲ್ಲಿ ದೇವತೆಯ ಮತ್ತು ಹೆಂಗಸರ ಪ್ರಾಮುಖ್ಯತೆಯೇ ಹೆಚ್ಚಾಗುತ್ತದೆ. ಈ ಗೌರಿ ಗಣೇಶನ ತಾಯಿಯಾಗಿ ಪುರಾಣಗಳಲ್ಲಿ ಕಾಣಿಸಿಕೊಳ್ಳುವ ಪಾರ್ವತಿಯಲ್ಲ. ಗೌರಿ ಎಂದರೆ ಕನ್ಯೆ ಎಂದು ಅರ್ಥ. ಕೆಲವು ಸಸಿಗಳನ್ನು ಒಂದಾಗಿ ಕಟ್ಟಿ ಅವುಗಳ ಜೊತೆಗೆ ಒಬ್ಬ ಕನ್ಯೆಯನ್ನೂ ಸೇರಿಸಿ ಗೌರಿ ಎಂದು ಪೂಜಿಸುತ್ತಾರೆ. ಈ ಪೂಜೆಯಲ್ಲಿ ಭಾಗವಹಿಸುವವರೆಲ್ಲರೂ ಸ್ತ್ರೀಯರೆ, ಕನ್ಯೆಯ ಜೊತೆಯಲ್ಲಿಯೇ ಆ ಸಸಿಗಳ ಕಟ್ಟನ್ನು ಬೇರೆ ಬೇರೆ ಜಾಗಗಳಿಗೆ ಕೊಂಡೊಯ್ಯುತ್ತಾರೆ. ಮುಂದೆ "ಗೌರಿ ಗೌರಿ ನೀನೇನು ನೋಡುತ್ತಿ" ಎನ್ನುವ ಪ್ರಶ್ನೆಗೆ ಆ ಕನ್ಯೆ "ನಾನು ಸಿರಿಸಂಪತ್ತು ನೋಡುತ್ತೇನೆ" ಎಂದು ಉತ್ತರಿಸುತ್ತಾಳೆ. ಆ ಕನ್ಯೆ ಹೋದ ಕಡೆಯಲ್ಲೆಲ್ಲ ಅವಳ ಹೆಜ್ಜೆ ಗುರುತುಗಳನ್ನು ರಂಗೋಲಿಯಲ್ಲಿ ಬರೆಯುತ್ತಾರೆ—ಎಂದರೆ ಗೌರಿ ಆ ಜಾಗಗಳಿಗೆ ಬಂದಿದ್ದಳೆಂದು ಅರ್ಥ. ಮಾರನೆದಿನ ಅಕ್ಕಿ ಹಿಟ್ಟು ಮತ್ತು ಕೊಬ್ಬರಿಗಳಿಂದ ಮಾಡಿದ ಸಿಹಿ ಪದಾರ್ಥಗಳನ್ನು ಗೌರಿಗೆ ಅರ್ಪಿಸುತ್ತಾರೆ. ಪೂಜೆ ಮಾಡಿದ ಪ್ರತಿ ಮುತ್ತೈದೆಯು ಹತ್ತಿಯ ಎಳೆಗಳಿಂದ ಹೊಸೆದ ದಾರಗಳನ್ನು ಗೌರಿಗೆ ಸಮರ್ಪಿಸುತ್ತಾಳೆ. ಆ ದಾರವು ಆಕೆಯ ಎತ್ತರದ ಹದಿನಾರರಷ್ಟು ಉದ್ದವಿರುತ್ತದೆ. ಮಾರನೆಯ ದಿನ ಎಲ್ಲರೂ ತಮ್ಮ ತಮ್ಮ ದಾರಗಳನ್ನು ಅರಿಸಿನದಲ್ಲಿ ನೆನೆಸಿ ಕತ್ತಿನಲ್ಲಿ ಧರಿಸುತ್ತಾರೆ. ಒಂದೊಂದು ದಾರದಲ್ಲೂ ಹದಿನಾರು ಗಂಟುಗಳು ಇರುತ್ತವೆ. ಆ ದಾರಗಳು ಅವರ ಕತ್ತಿನಲ್ಲಿ ಮುಂದಿನ ಸುಗ್ಗಿಯ ದಿನದವರೆಗೂ ಇರುತ್ತವೆ. ಆ ದಿನ ಗೌರಿಯ ಗೊಂಬೆಯನ್ನು ಒಬ್ಬ ಸ್ತ್ರೀಯು ತಲೆಯ ಮೇಲೆ ಹೊತ್ತು ಹಿಂದಿರುಗಿ ನೋಡದೆ ನದಿಯವರೆಗೂ ಹೋಗಿ ನೀರಿನಲ್ಲಿ ಆ ಪ್ರತಿಮೆಯನ್ನು ವಿಸರ್ಜಿಸುತ್ತಾಳೆ. ಈ ವ್ರತಕ್ಕೆ ಸಂಬಂಧಿಸಿದಂತೆ ಒಂದು ಕಥೆಯೂ ಉಂಟು.

ಒಬ್ಬ ಬಡವ ತನ್ನ ಬಡತನವನ್ನು ತಾಳಲಾರದೆ ಆತ್ಮಹತ್ಯೆಗೆಂದು ನದಿಗೆ ಇಳಿದ. ಆಗ ಅವನಿಗೆ ಒಬ್ಬಳು ಮುದಿಮುತ್ತೈದೆ ಕಾಣಿಸಿಕೊಂಡು ಸಾಯ ಬೇಡವೆಂದು ಮನಒಲಿಸಿ ಅವನ ಜೊತೆಯಲ್ಲಿಯೇ ತಾನೂ ಅವನ ಮನೆಗೆ ಬಂದಳು. ಆಕೆಯ ಆಗಮನದ ನಂತರ ಅವನ ಮನೆಯು ಶ್ರೀಮಂತವಾಯಿತು. ಆ ವೃದ್ಧೆ ಹೊರಟುಹೋಗುವ ಸಮಯ ಬಂದಾಗ ಸಿರಿವಂತನಾದ ಅವನು ನದಿಯವರೆಗೂ ಆಕೆಯ ಜೊತೆಯಲ್ಲಿ ಹೋದನು. ಆಗ ಆ ಮುದುಕಿ ನದಿಯ ದಡದ ಮಣ್ಣನ್ನು ಸ್ವಲ್ಪ ತೆಗೆದು ಅವನ ಕೈಗೆ ಕೊಟ್ಟು ಅದನ್ನು ಪ್ರತಿವರ್ಷವು

ಭಾದ್ರಪದ ಮಾಸದಲ್ಲಿ ಗೌರಿಯ ಹೆಸರನ್ನು ನೆನೆಸಿಕೊಂಡು ಮನೆಯಲ್ಲಿ ಎಲ್ಲ ಕಡೆಯು ಚೆಲ್ಲುವಂತೆ ಹೇಳಿದಳು.

ಈ ಕಥೆ ಮತ್ತು ವ್ರತಗಳಲ್ಲಿನ ಸಂಕೇತಗಳನ್ನು ಈ ರೀತಿ ಅರ್ಥೈಸಬಹುದು :—ನದೀ ತೀರದ ಮಣ್ಣು ಬೆಳೆಗಳಿಗೆ ಶ್ರೇಷ್ಠ, ಮುದಿಮುತ್ತೈದೆ ಹೊರಟು ಹೋಗುತ್ತಿರುವ ಋತುವಿಗೆ ಸಂಕೇತ. ಈ ಹಬ್ಬದಲ್ಲಿ ಭಾಗವಹಿಸುವ ಕನ್ಯೆ–ಬರಲಿರುವ ಹೊಸಕಾಲ. ಗೌರಿಯ ಮಣ್ಣಿನ ಗೊಂಬೆ–ಕಳೆದುಹೋದ ಕಾಲ. ಮಣ್ಣಿನ ಗೊಂಬೆಯನ್ನು ನೀರಿನಲ್ಲಿ ಬಿಡುವುದು, ಮಣ್ಣನ್ನು ಚೆಲ್ಲುವುದು–ಮುಂತಾದವು ಹೊಸ ಋತುಗಳಿಗೆ ಎಡೆಮಾಡಿಕೊಟ್ಟು ಹಳೆಯ ಋತುಗಳು ಹೊರಟುಹೋಗುವುದನ್ನು ಸೂಚಿಸುತ್ತವೆ. ದಾರದಲ್ಲಿನ ಹದಿನಾರು ಗಂಟುಗಳು ಭತ್ತ ಬೆಳೆಯಲು ಬೇಕಾಗುವ ಹದಿನಾರು ವಾರಗಳಿಗೆ ಚಿನ್ಹೆಗಳು.

ಒಳ್ಳೆಯ ಬೆಳೆ ಬೆಳೆಯಲು ಆಚರಿಸುವ ಈ ವ್ರತದಲ್ಲಿ ಭಾಗವಹಿಸುವವರೆಲ್ಲರೂ ಸ್ತ್ರೀಯರೇ. ಪುರುಷರಿಗೆ ಈ ಆಚರಣೆಗಳಲ್ಲಿ ಯಾವುದೇ ರೀತಿಯ ಸ್ಥಾನವಿಲ್ಲ. ಆದರೂ ಈ ಕಥೆಯ ಸಂಬಂಧದಲ್ಲಿ ಗಣೇಶ ಮತ್ತು ಶಿವ–ಇವರಿಬ್ಬರ ಹೆಸರುಗಳು ಕೇಳಿ ಬರುವುದುಂಟು. ಕೃಷಿ ಪ್ರಧಾನವಾದ ಈ ಹಬ್ಬದಲ್ಲಿ ಇವರಿಗೆ ಇರುವ ಪ್ರಾಮುಖ್ಯತೆ ಗೌಣ. ಶಿವನು ತನ್ನ ಹೆಂಡತಿಯ ಸೀರೆಯ ಪದರುಗಳಲ್ಲಿ ಅವಿತುಕೊಂಡಿದ್ದು ಅವಳನ್ನು ರಹಸ್ಯವಾಗಿ ಹಿಂಬಾಲಿಸಿದನಂತೆ. ಈ ವ್ರತದ ಸಮಯದಲ್ಲಿ ಒಂದು ಪಾತ್ರೆಯಲ್ಲಿ ಅಕ್ಕಿಯನ್ನು ಸುರಿದು ಅದರ ಮೇಲೆ ತೆಂಗಿನಕಾಯಿಯನ್ನು ಇಟ್ಟು ಅದನ್ನು ಶಿವನೆಂದು ಕರೆಯುತ್ತಾರೆ. ಶಿವನ ಈ ಸ್ಥಾನವೇ ಪುರುಷರಿಗೆ ಈ ವ್ರತದಲ್ಲಿ ಪ್ರಾಮುಖ್ಯತೆ ಇಲ್ಲದಿರುವುದನ್ನು ತಿಳಿಸುತ್ತದೆ. ಪುರಾಣಗಳಲ್ಲಿನ ದೈವವಾದ ಶಿವನನ್ನು ಕೃಷಿಗೆ ಸಂಬಂಧಿಸಿದ ಈ ವ್ರತದಲ್ಲಿ ಸೇರಿಸಿರುವುದರ ಪರಿಣಾಮ ಇದು.

ಈಗ ಒಂದು ಮಾತು ಸ್ಪಷ್ಟ. ಪ್ರಾಚೀನಕಾಲದ ಕೃಷಿ ಪ್ರಧಾನ ವ್ಯವಸ್ಥೆಯಲ್ಲಿದ್ದುದು ಮಾತೃ ಪ್ರಾಧಾನ್ಯತೆ, ಪ್ರಕೃತಿಯನ್ನು ಸ್ತ್ರೀಯೆಂದೇ ಪೂಜಿಸುತ್ತಿದ್ದರು. ಈ ಸ್ತ್ರೀ ಪ್ರಾಧಾನ್ಯತೆಯನ್ನು ಸೈದ್ಧಾಂತಿಕವಾಗಿ ವಿವರಿಸುವ ಸೂತ್ರಗಳು ಏನಿರಬಹುದೆಂದು ಈಗ ಯೋಚಿಸಬೇಕಾಗಿದೆ.

**ಬೇಟೆ, ಕೃಷಿ ಮತ್ತು ಪಶುಪಾಲನೆ ;**

ಆರ್ಥಿಕ ಕ್ಷೇತ್ರದಲ್ಲಿನ ಬೆಳವಣಿಗೆಗಳನ್ನು ಗಮನದಲ್ಲಿರಿಸಿಕೊಂಡು

ಪ್ರಾಚೀನ ಸಮಾಜದಲ್ಲಿ ಮೇಲಿನ ಹಂತಗಳನ್ನು ಗುರುತಿಸಬಹುದು ಮತ್ತು ಒಂದೊಂದು ಹಂತದಲ್ಲಿಯೂ ವಿವಿಧ ಸ್ತರಗಳನ್ನು ಕಾಣಬಹುದು.

ಉದಾಹರಣೆಗೆ–ಪಶುಪಾಲನೆಯ ಒಂದು ಹಂತದಲ್ಲಿ ಜನರು ಕೃಷಿಯನ್ನು ವೃತ್ತಿಯನ್ನಾಗಿಸಿಕೊಂಡು ಅವರ ಜೊತೆಯಲ್ಲಿಯೇ ಪಶುಪಾಲನೆಯನ್ನೂ ಮುಂದುವರಿಸಿದರು. ಕೃಷಿ ಜೀವನದ ಮತ್ತೊಂದು ಹಂತದಲ್ಲಿ ಭೂಮಿಯನ್ನು ಉತ್ತಿ ಬೆಳೆ ಬೆಳೆಯುವ ಪದ್ಧತಿಯನ್ನು ರೂಢಿಸಿಕೊಂಡರು.

ಪಶುಪಾಲನೆ ಮತ್ತು ಕೃಷಿಗಳಿಂದ ಜೀವನ ನಡೆಸುತ್ತಿದ್ದವರು, ಮುಂದೆ ಕೈಗಾರಿಕೆಗಳಲ್ಲೂ ನುರಿತವರಾದರು. ಅದುವರೆಗೂ ಅಲೆಮಾರಿಗಳಾಗಿದ್ದವರು ಒಂದೆಡೆ ಸ್ಥಿರವಾಗಿ ನೆಲೆಸಿದರು. ಅಂದಿನಿಂದ ಅವರು ಉತ್ಪಾದಿಸಿದ ವಸ್ತುಗಳಿಗೆ ಬೆಲೆಕಟ್ಟಿ ವಸ್ತುಗಳ ಮಧ್ಯೆ ವಿನಿಮಯ ಪ್ರಾರಂಭಿಸಿದರು. ಈ ಹಂತದಲ್ಲಿ ಅರಣ್ಯವಾಸೀ ಸಮಾಜ ಕ್ರಮೇಣ ಅದೃಶ್ಯವಾಗಿ ಅದರ ಜಾಗದಲ್ಲಿ ನಾಗರಿಕ ಸಮಾಜ ಕಾಣಿಸಿಕೊಂಡಿತು. ಇದರ ಫಲವಾಗಿ ಕಾಲಕ್ರಮದಲ್ಲಿ ಜನರು ಆಹಾರ ಶೇಖರಣೆಯ ಹಂತದಿಂದ ಆಹಾರೋತ್ಪಾದನೆ ಮತ್ತು ಪಶುಪಾಲನೆಯ ಹಂತವನ್ನು ತಲುಪಿ ತಮ್ಮ ಕೆಲಸಕ್ಕೆ ಅನುಕೂಲ ಪರಿಸ್ಥಿತಿಗಳಿದ್ದ ಜಾಗಗಳಲ್ಲಿ ವಾಸಿಸಲು ಪ್ರಾರಂಭಿಸಿದರು. ಪ್ರಾಚೀನ ಭಾರತದ ಆರ್ಥಿಕ ಪರಿಸ್ಥಿತಿಯಲ್ಲಿನ ಈ ಬದಲಾವಣೆಗಳನ್ನು ಅರ್ಥಮಾಡಿಕೊಳ್ಳುವ ಮೂಲಕ ನಮ್ಮ ಸಂಸ್ಕೃತಿಯ ಎರಡು ಧೋರಣೆಗಳನ್ನು (ವೈದಿಕ ಮತ್ತು ಅವೈದಿಕ) ಗ್ರಹಿಸಬಹುದು.

## ಪ್ರಾಚೀನ ಸಮಾಜದಲ್ಲಿ ಸ್ತ್ರೀ ಪುರುಷರ ಸ್ಥಾನ ಮಾನಗಳು

ಸಾಮಾಜಿಕವಾಗಿ ಪ್ರಾಚೀನ ಭಾರತದಲ್ಲಿ ಸ್ತ್ರೀ ಪುರುಷರ ಪ್ರಾಮುಖ್ಯತೆಯನ್ನು ನಿಗದಿ ಪಡಿಸುವ ಆರ್ಥಿಕ ಸ್ಥಿತಿಗತಿಗಳನ್ನು ಇಂದಿಗೂ ಅರಣ್ಯವಾಸಿಗಳಾಗಿಯೇ ಉಳಿದಿರುವ ತೋಡರ ಜೀವನವನ್ನು ಅಭ್ಯಾಸ ಮಾಡುವುದರ ಮೂಲಕ ತಿಳಿಯಬಹುದು. ನೀಲಗಿರಿಗಳಲ್ಲಿ ವಾಸಿಸುವ ಇವರಿಗೆ ಕೃಷಿಯ ಬಗ್ಗೆ ಏನೂ ತಿಳಿಯದು. ಪಶುಪಾಲನೆ ಮಾತ್ರ ಇವರಿಗೆ ಗೊತ್ತು. ಇವರು ತಮಗೆ ಬೇಕಾದ ಆಹಾರವನ್ನು ಕರ್ನಾಟಕದ ಬಾಡಗರೆಂಬ ಜನರಿಂದ ಪಡೆಯುತ್ತಾರೆ. ಇವರದು ಪಿತೃಪ್ರಧಾನ ಸಮಾಜ. ತಂದೆಯ ವಂಶವೇ ಮಗನದಾಗಿರುತ್ತದೆ. ಇವರಲ್ಲಿ ಬಹುಪತೀತ್ವ ರೂಢಿಯಲ್ಲಿದೆ. ಹಿಂದೆ ಹೆಣ್ಣು ಮಕ್ಕಳು ಹುಟ್ಟಿದ ತಕ್ಷಣ ಅವರನ್ನು ಕೊಲ್ಲುತ್ತಿದ್ದ ಪದ್ಧತಿ ಇತ್ತಾದರೂ ಈಗ ಆ ಪರಿಸ್ಥಿತಿ ಇಲ್ಲ.

ಅಸ್ಸಾಮಿನ ಖಾಸಿ ಜನರಿಗೆ ಕೃಷಿ ಗೊತ್ತು. ಅವರು ಬೇಟೆಯಾಡು ತ್ತಾರೆ, ಮೀನು ಹಿಡಿಯುತ್ತಾರೆ, ಪಶುಪಾಲನೆ ಮಾಡುತ್ತಾರೆ. ಇವರ ಮುಖ್ಯ ಬೆಳೆ ಭತ್ತ. ಆದರೆ ಇವರಿಗೆ ನೇಗಿಲನ್ನು ಉಪಯೋಗಿಸಿ ಭೂಮಿಯನ್ನು ಉಳು ವುದು ಗೊತ್ತಿಲ್ಲ. ಇವರದು ಮಾತೃ ಪ್ರಧಾನ ವ್ಯವಸ್ಥೆ. ತಾಯಿಯೇ ಮನೆಗೆ ಯಜಮಾನಿ. ಒಂದು ಮನೆಯ ಆಸ್ತಿಯ ಮೇಲೆ ತಾಯಿಯದೇ ಹಕ್ಕು. ತಂದೆಗೆ ಮಕ್ಕಳ ಮೇಲೆಯೂ ಯಾವ ಅಧಿಕಾರವಿರುವುದಿಲ್ಲ. ತಾಯಿಯ ವಂಶವೇ ಮಗನ ವಂಶವಾಗುತ್ತದೆ. ಅವನು ಮರಣ ಹೊಂದಿದರೆ ಅವನ ತಾಯಿಯ ಕಡೆಯವರ ಸಮಾಧಿಗಳ ಹತ್ತಿರವೇ ಅವನನ್ನು ಸಮಾಧಿ ಮಾಡುತ್ತಾರೆ. ಗಂಡ ಹೆಂಡತಿಯ ಮನೆಯಲ್ಲಿ ವಾಸಮಾಡುವುದಿಲ್ಲ. ಕತ್ತಲಾದ ಮೇಲೆ ಮಾತ್ರ ಅವನು ತನ್ನ ಹೆಂಡತಿಯ ಮನೆಗೆ ಹೋಗಬಹುದು. ತಾಯಿ ಮತ್ತು ಅವಳ ಸೋದರನಿಗೇ ಎಲ್ಲ ಗೌರವ. ಈ ಜನರ ಸಮಾಧಿಗಳ ಹತ್ತಿರ ನೆಲದ ಮೇಲೆ ಹಾಸಿರುವ ಶಿಲಾಫಲಕಗಳಿದ್ದರೆ ಅವು ಸ್ತ್ರೀಯರ ಸಮಾಧಿಗಳೆಂದು ಅರ್ಥ. ಪುರುಷರ ಸಮಾಧಿಗಳ ಹತ್ತಿರ ನಿಲ್ಲಿಸಿದ ಫಲಕಗಳಿರುತ್ತವೆ. ಇವುಗಳ ಮೇಲೆ ತಾಯಿಯ ವಂಶದ ಜನರ ಹೆಸರುಗಳನ್ನು ಕೆತ್ತುತ್ತಾರೆ. ಇವರು ಪೂಜಿಸುವವ ರೆಲ್ಲರೂ ಸ್ತ್ರೀ ದೇವತೆಗಳೇ. ಪೂಜೆ ಮಾಡುವವರೂ ಸ್ತ್ರೀಯರೇ. ಅಲ್ಲಲ್ಲಿ ಪುರುಷ ದೈವಗಳು ಕಾಣಿಸಿಕೊಂಡರೂ ಅವರಿಗೆ ಯಾವುದೇ ಪ್ರಾಮುಖ್ಯತೆ ಇಲ್ಲ. ರಾಜ್ಯಾಧಿಕಾರವನ್ನು ವಹಿಸಿದ ಸ್ತ್ರೀಯರ ಉದಾಹರಣೆಗಳೂ ಉಂಟು.

ತೋಡರು ಮತ್ತು ಖಾಸೀ ಜನರ ಜೀವನ ವಿಧಾನಗಳನ್ನು ಹೋಲಿಸಿ ನೋಡಿ ದಾಗ ಒಂದು ವಿಷಯ ಸ್ಪಷ್ಟವಾಗುತ್ತದೆ. ಪಶುಪಾಲನಾ ಹಂತದಲ್ಲಿರುವವರದು ಪಿತೃಪ್ರಧಾನ ವ್ಯವಸ್ಥೆಯೂ ಮತ್ತು ಕೃಷಿಯಲ್ಲಿ ತೊಡಗಿದ್ದು ಅದರ ಪ್ರಾಥಮಿಕ ಹಂತದಲ್ಲಿರುವವರದು ಮಾತೃ ಪ್ರಧಾನ ವ್ಯವಸ್ಥೆಯೂ ಆಗಿರುತ್ತದೆ. ಈಗ ಈ ಮಾತೃ ಪ್ರಧಾನ ವ್ಯವಸ್ಥೆ ಬೆಳೆಯಲು ಕಾರಣವಾದ ಆರ್ಥಿಕ ಅಂಶಗಳನ್ನು ಅರ್ಥ ಮಾಡಿಕೊಳ್ಳೋಣ.

ಆಹಾರ ಶೇಕರಣೆಯ ಹಂತದಿಂದ ಕೃಷಿಯ ಮೂಲಕ ಆಹಾರೋತ್ಪಾದನೆಯ ಹಂತದವರೆಗೂ ಭಾರತೀಯ ಸಮಾಜದಲ್ಲಿ ಮಾತೃ–ಪಿತೃ ಪ್ರಾಧಾನ್ಯತೆಯಲ್ಲಿ ಏರು ಪೇರುಗಳಾಗಿವೆ. ಮೊದಲು ಅಸ್ತಿತ್ವದಲ್ಲಿದ್ದದ್ದು ಮಾತೃ ಪ್ರಧಾನ ವ್ಯವಸ್ಥೆ. ಇಂಥ ವ್ಯವಸ್ಥೆಯಲ್ಲಿ ವ್ಯಕ್ತಿಗಳ ಸಂಬಂಧಗಳು ಅವರು ತಮ್ಮ ತಾಯಂದಿರ ಕಡೆಯ ವರ ಜೊತೆ ಯಾವ ರೀತಿಯ ಸಂಬಂಧಗಳನ್ನು ಹೊಂದಿದ್ದರೆಂಬುದನ್ನು ಅವಲಂಬಿ ಸುತ್ತವೆ. ವ್ಯಕ್ತಿಗಳ ಸಾಮಾಜಿಕ ಜವಾಬ್ದಾರಿ, ಅವರು ಅನುಭವಿಸುವ ಅನುಕೂಲಗಳು ಮತ್ತು ಅವರ ಇತಿಮಿತಿಗಳೆಲ್ಲವು ಮಾತೃ ಪರಂಪರೆಯ ಮೇಲೆಯೇ

ಆಧಾರಿತವಾಗಿದ್ದು ನಿರ್ಣಯಿಸಲ್ಪಡುತ್ತವೆ. ಇಂಥ ವ್ಯವಸ್ಥೆಯಲ್ಲಿ ತಾಯಿಯ ಬಣವನ್ನು ನಿರ್ಣಯಿಸಲು ಬಳಸುವ ಅಂಶಗಳೆಂದರೆ :—ಪರಂಪರೆ, ರಕ್ತಸಂಬಂಧ, ವಂಶ, ವಾರಸತ್ವದ ಹಕ್ಕು, ಅಧಿಕಾರ ಮತ್ತು ವಿವಾಹ. ಈ ಎಲ್ಲಾ ಅಂಶಗಳನ್ನು ಅಸ್ಸಾಮಿನ ಖಾಸಿ ಜನಾಂಗದವರು ಚಾಚೂತಪ್ಪದೆ ಪಾಲಿಸುತ್ತಾರೆ. ಹಲವು ಇತರೆ ಪಂಗಡಗಳಲ್ಲಿ, ಇವುಗಳಲ್ಲಿ ಒಂದು ಅಂಶಕ್ಕೆ ಪ್ರಾಧಾನ್ಯತೆ ನೀಡುತ್ತಾರೆ.

ಮಾತೃ, ಪಿತೃ ಪ್ರಾಧಾನ್ಯತೆಗಳಲ್ಲಿ ಮೊದಲನೆಯದು ಯಾವುದು ಎನ್ನುವುದರ ಬಗ್ಗೆ ಈಗ ಸಂದೇಹ ಉಳಿದಿಲ್ಲ. ಐತಿಹಾಸಿಕವಾಗಿ ಲಭ್ಯವಿರುವ ದಾಖಲೆಗಳು ಮಾತೃಪ್ರಧಾನ ವ್ಯವಸ್ಥೆಯೇ ಮೊದಲನೆಯದೆನ್ನುವುದನ್ನು ಸ್ಪಷ್ಟಪಡಿಸುತ್ತವೆ. ಕಾಲಕ್ರಮದಲ್ಲಿ ಕೆಲವು ಪಂಗಡಗಳು ಮಾತೃ ಪ್ರಾಧಾನ್ಯತೆಯಿಂದಲೂ, ಮತ್ತೆ ಕೆಲವು ಪಂಗಡಗಳು ಪಿತೃ ಪ್ರಾಧಾನ್ಯತೆಯಿಂದಲೂ ಪ್ರಭಾವಿತವಾಗಿ ಬೇರೆಬೇರೆ ಆಚಾರ ವ್ಯವಹಾರಗಳು ಅನುಷ್ಠಾನಕ್ಕೆ ಬಂದವು. ಭಾರತದಲ್ಲಿಯೇ ಅಲ್ಲದೆ ಯುರೋಪ್ ಮತ್ತು ಅಮೆರಿಕಗಳಲ್ಲಿ ಕೆಲವೆಡೆ ಮಾತೃಪ್ರಧಾನ ವ್ಯವಸ್ಥೆ ಇತ್ತು ಎನ್ನುವುದಕ್ಕೂ ಆಧಾರಗಳಿವೆ.

ಕೆಲವು ಹಿಂದುಳಿದ ಪಂಗಡಗಳಲ್ಲಿ ಪಿತೃಪ್ರಧಾನ ವ್ಯವಸ್ಥೆಯಿದ್ದು, ಮುಂದುವರಿದವರಲ್ಲಿ ಮಾತೃಪ್ರಧಾನ ವ್ಯವಸ್ಥೆ ಕಾಣಬರುವುದರಿಂದ ಕೆಲವರು ಪಿತೃಪ್ರಧಾನ ವ್ಯವಸ್ಥೆಯೇ ಮೊದಲಿನದೆಂದು ಭಾವಿಸುತ್ತಾರೆ. ಉತ್ತರ ಅಮೆರಿಕದ ಕೆಲವು ಪಂಗಡಗಳಲ್ಲಿ ಈ ವಿಪರ್ಯಾಸ ಕಾಣಸಿಗುತ್ತದೆ.

ಪಿತೃಪ್ರಧಾನ ವ್ಯವಸ್ಥೆ ಇರುವ ಸಮಾಜದ ಜನರು ಪಶುಪಾಲನೆಯಲ್ಲಿ ತೊಡಗಿದರೆ, ಮಾತೃಪ್ರಧಾನ ವ್ಯವಸ್ಥೆ ಇರುವ ಸಮಾಜದಲ್ಲಿ ಮುಖ್ಯ ವೃತ್ತಿ ಕೃಷಿ. ಅಸ್ಸಾಮಿನ ಖಾಸೀಜನಾಂಗದವರು ಆಗಿನ ಕಾಲಕ್ಕೆ ಮುಂದುವರೆದವರೆಂದೇ ಹೇಳಬಹುದಾದ ಕೃಷಿ ಪದ್ಧತಿಗಳನ್ನು ಆಚರಣೆಗೆ ತಂದರು. ಆದರೆ ಅವರಿಗೆ ನೇಗಿಲ ಉಪಯೋಗ ತಿಳಿದಿರಲಿಲ್ಲ. ಈಗಾಗಲೇ ಹೇಳಿರುವಂತೆ ಅವರದು ಮಾತೃಪ್ರಧಾನ ವ್ಯವಸ್ಥೆ.

ಕಳೆದ ಶತಮಾನದ ವಿದ್ವಾಂಸರು ಸ್ತ್ರೀ ಪುರುಷರ ಪ್ರಾಧಾನ್ಯತೆಯನ್ನು ಅಳೆಯುವಾಗ ಅದರಲ್ಲಿನ ಏರುಪೇರಿಗೆ ಕಾರಣವಾದ ಆರ್ಥಿಕ ಬೆಳವಣಿಗೆಗಳನ್ನು ಗಮನಿಸದಿರುವುದು ಒಂದು ತಪ್ಪು ಹೆಜ್ಜೆ. ಆದುದರಿಂದಲೇ ಈ ಎರಡು ವ್ಯವ

ಸ್ಥೆಗಳ ಕಾಲಕ್ರಮುವನ್ನು ನಿರ್ದಿಷ್ಟವಾಗಿ ನಿರ್ಣಯಿಸಲು ಅವರಿಗೆ ಸಾಧ್ಯ ವಾಗಲಿಲ್ಲ.

ಮನುಷ್ಯನು ಬೇಟೆಯ ಮೂಲಕ ಆಹಾರವನ್ನು ಶೇಖರಿಸುವ ಹಂತವನ್ನು ತಲುಪುವ ಮೊದಲು ಯಾವುದೇ ರೀತಿಯ ಶ್ರಮ ವಿಭಜನೆ ಇರಲಿಲ್ಲ. ಉತ್ಪತ್ತಿಯೇ ಇಲ್ಲದಿರುವುದರಿಂದ ಉತ್ಪಾದನಾ ಸಂಬಂಧಗಳು ರೂಪುಗೊಳ್ಳುವ ಪ್ರಶ್ನೆಯೂ ಇಲ್ಲ. ಅಂತ ಸ್ಥಿತಿಯಲ್ಲಿ ಬಹು ಮುಖ್ಯವಾದ ಮಕ್ಕಳ ಪೋಷಣೆಯ ಭಾರವನ್ನು ಹೊತ್ತ ಹೆಣ್ಣು ಸಹಜವಾಗಿಯೇ ಪ್ರಾಮುಖ್ಯತೆ ಉಳ್ಳವಳಾದಳು. ಈ ಪ್ರಾಧಾನ್ಯತೆಗೆ ಸಾಮಾಜಿಕವಾಗಿ ಬೇರೆ ಯಾವುದೇ ರೀತಿಯ ಮಹತ್ವವು ಇರಲಿಲ್ಲವಾದರೂ ವಂಶಾಭಿವೃದ್ಧಿಗೆ ಕಾರಣಭೂತಳೆಂಬುವ ವಿಶಿಷ್ಟ ಸ್ಥಾನ ಅವಳ ಪಾಲಿಗಿತ್ತು.

ಮೊದಲಿಗೆ ಪ್ರಾಣಿಗಳಲ್ಲಿನ ರೀತಿಯಲ್ಲಿಯೇ ಮನಷ್ಯರಲ್ಲೂ ಸ್ತ್ರೀಪುರುಷ ಸಂಬಂಧ ಎರಡು ರೀತಿಯದಾಗಿತ್ತು–ಲೈಂಗಿಕ–ಮತ್ತು ತಾಯಿಮಕ್ಕಳ ಸಂಬಂಧ. ಮಕ್ಕಳು ಒಂದು ವಯಸ್ಸಿಗೆ ಬಂದ ನಂತರ ತಾಯಿಯ ಜೊತೆ ಅವರ ಸಂಬಂಧವೂ ಸಹ ಲೈಂಗಿಕ ರೂಪ ಪಡೆಯುತ್ತಿತ್ತು. ತಾಯಿ ಮಕ್ಕಳ, ಅಣ್ಣತಂಗಿಯರ ಸಂಬಂಧಗಳು ಈಗಿರುವ ರೀತಿಯಲ್ಲಿ ರೂಪುಗೊಳ್ಳಬೇಕಾದರೆ ಹಲವು ಶತಮಾನ ಗಳೇ ಬೇಕಾದವು. ಸ್ತ್ರೀ ಎಂದರೆ ವಂಶಾಭಿವೃದ್ಧಿಗೆ ಕಾರಣಭೂತಳೆಂಬುವ ಭಾವನೆ ಕ್ರಮೇಣ ಎಲ್ಲರಲ್ಲೂ ನೆಲೆಯೂರಿತು. ಖಾಸಿಗಳಲ್ಲಿ ಹೆಣ್ಣಿನಿಂದ ವಂಶ ಎಂದು ಅರ್ಥಬರುವ ಗಾದೆಯ ಮಾತೇ ಇದೆ. ಈ ರೀತಿ ಹೊಸ ಸಂಬಂಧಗಳು ಹುಟ್ಟಿಕೊಂಡು ಕೆಲವು ಮಿತಿಗಳಿಗೆ ಒಳಪಟ್ಟು ಗಟ್ಟಿಬೀಳಬೇಕಾದರೆ ಸ್ತ್ರೀಪುರುಷ ರಲ್ಲಿ ಹೆಚ್ಚಿಚ್ಚು ಸಹಕಾರ ಬೇಕಾಯಿತು. ಸಂಸಾರಕ್ಕಾಗಿ ಆಹಾರ ಸಂಪಾದನೆ, ಅದಕ್ಕಾಗಿ ಬೇಟೆ, ಪಶುಪೋಷಣೆ ಮತ್ತು ಕೃಷಿಗಳು ರೂಢಿಗೆ ಬಂದವು. ಕುಟುಂಬದಲ್ಲಿನ ಗಂಡಿಗೆ ಮಕ್ಕಳ ಪೋಷಣೆಯ ಯಾವುದೇ ಜವಾಬ್ದಾರಿ. ಇರ ಲಿಲ್ಲ. (ಸಾಮಾನ್ಯವಾಗಿ ಈಗಿನ ಸ್ಥಿತಿಯೂ ಅದೇ)

ಬೇಟೆಯ ಮೂಲಕ ಆಹಾರ ಸಂಪಾದನೆ ಮಾಡುವುದನ್ನು ಕಲಿಯುವ ಮೊದಲು ಇದ್ದದ್ದು ಸ್ತ್ರೀ ಪ್ರಾಧಾನ್ಯತೆ. ಮುಂದೆ ಬೇಟೆಯಾಡುವ ಹಂತವನ್ನು ಮುಟ್ಟಿದಾಗ ಬೇಟೆಯಾಡುತ್ತಿದ್ದುದು ಗಂಡು. ಆದ್ದರಿಂದ ಅವನ ಸ್ಥಾನ ಮುಖ್ಯ ವಾಯಿತು. ಅದೇ ರೀತಿಯಲ್ಲಿ ಪಶುಪೋಷಣೆಯ ಜವಾಬ್ದಾರಿಯನ್ನೂ ಗಂಡೇ ಹೊತ್ತಿದ್ದರಿಂದ ಈ ಹಂತದಲ್ಲಿಯೂ ಅವನದೇ ಪ್ರಾಧಾನ್ಯತೆ. ಮನೆಯ ಗಂಡಸು ಹೊರಗೆ ಹೋದಾಗ ಹೆಣ್ಣು ಮನೆಯ ಸುತ್ತಲೂ ಕೈಯಲ್ಲೇ ಅಗೆದು ಚಿಕ್ಕದಾದ

ರೀತಿಯಲ್ಲಿಯೇ ಕೃಷಿಯನ್ನು ಪ್ರಾರಂಭಿಸಿದಳು. ಕೃಷಿಯ ಮೂಲಕ ಆದಾಯ ಹೆಚ್ಚಾದಾಗ ಕ್ರಮೇಣ ಅವಳ ಸ್ಥಾನ ಪ್ರಧಾನವಾಯಿತು. ಇನ್ನೂ ಮುಂದೆ ಪ್ರಾಣಿಗಳನ್ನು ಉಪಯೋಗಿಸಿ ನೇಗಿಲಿನಿಂದ ಭೂಮಿಯನ್ನು ಉಳುವುದು ಶುರುವಾದಾಗ ಉತ್ಪಾದನಾ ಸಲಕರಣೆಗಳು ಗಂಡಿನ ಕೈಗೆ ಬಂದವು. ಆಗ ಮತ್ತೆ ಅವನ ಪ್ರಾಧಾನ್ಯತೆ ನೆಲೆಗೊಂಡಿತು. ಭೂಮಿಯೊಳಗಿಂದ ಲೋಹಗಳನ್ನು ತೆಗೆದು ಅವುಗಳಿಂದ ಇನ್ನೂ ಹೆಚ್ಚು ಸಲಕರಣೆಗಳನ್ನು ತಯಾರಿಸಲು ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಿದಾಗ ಈ ಪಿತೃ ಪ್ರಾಧಾನ್ಯತೆ ಇನ್ನೂ ಗಟ್ಟಿಯಾಯಿತು. ಹೆಣ್ಣು ಗಂಡುಗಳ ಪ್ರಾಮುಖ್ಯತೆಯಲ್ಲಿನ ಈ ಏರುಪೇರುಗಳು ಉತ್ಪಾದನಾ ವಿಧಾನಗಳ ವೈವಿಧ್ಯತೆಯ ಮೇಲೆ ಅವಲಂಬಿಸಿದ್ದವೆಂಬುವುದು ಮೇಲಿನ ವಿವರಗಳಿಂಧ ಸಿದ್ಧವಾಗುವ ಅಂಶ.

ಮನುಷ್ಯರು ಪೂಜಿಸುವ ದೇವದೇವತೆಯರ ಪ್ರಾಮುಖ್ಯತೆಯ ನಿರ್ಧಾರದಲ್ಲಿಯೂ ಆಯಾ ಕಾಲದಲ್ಲಿನ ಸ್ತ್ರೀಪುರುಷರ ಪ್ರಾಧಾನ್ಯತೆಯೇ ಪ್ರಮುಖ ಪಾತ್ರ ವಹಿಸುತ್ತಿತ್ತು. ನಾವು ನಮ್ಮ ಅವಶ್ಯಕತೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಸೃಷ್ಟಿಸಿಕೊಂಡಿದ್ದರಿಂದ ದೇವರುಗಳ ಸ್ಥಾನಮಾನದಲ್ಲಿಯೂ ಈ ಬದಲಾವಣೆಗಳು ಅನಿವಾರ್ಯವಾದವು. ಬೇಟೆ ಮತ್ತು ಪಶುಪೋಷಣೆಗಳು ಆಹಾರ ಸಂಪಾದನೆಗೆ ಆಧಾರವಾಗಿದ್ದ ಕಾಲದಲ್ಲಿನ ದೇವರುಗಳು ಹೆಚ್ಚಾಗಿ ಗಂಡಸರು. ಕೃಷಿಯನ್ನು ಅಳವಡಿಸಿಕೊಂಡು ಸ್ವಲ್ಪ ಮಟ್ಟಿಗೆ ಅಭಿವೃದ್ಧಿ ಹೊಂದಿದ ಸಮಾಜದಲ್ಲಿ ಪ್ರಮುಖರಾದವರು ದೇವತೆಯರು. ವೇದಕಾಲದಲ್ಲಿ ಮತ್ತು ಅದರ ಹಿಂದೆ ಇದ್ದ ದೇವರುಗಳ ವಿವರಗಳನ್ನು ಪರಿಶೀಲಿಸಿದರೆ ವಿವಿಧ ಕಾಲಗಳಲ್ಲಿ ಜನರಲ್ಲಿ ಸ್ತ್ರೀ ಪುರುಷರ ಬಗ್ಗೆ ಇದ್ದ ಮನೋಭಾವ ಸ್ಪಷ್ಟವಾಗುವುದು.

**ಪುರುಷಸೂಕ್ತ ಮತ್ತು ಪಶುಪೋಷಣೆ :**

ವೇದಕಾಲದ ಜನರ ಮುಖ್ಯ ವೃತ್ತಿ ಪಶುಪೋಷಣೆ. ಈ ವೃತ್ತಿ ಉಪನಿಷತ್ತುಗಳ ಕಾಲದಲ್ಲಿಯೂ ಮುಂದುವರೆಯಿತು. ಋಗ್ವೇದದ ಕಾಲದ ಜನರ ಪ್ರಧಾನ ಆಹಾರ ಅಕ್ಕಿ ಆಗಿರಲಿಲ್ಲ, ಬಾರ್ಲಿಯಾಗಿತ್ತು. ಪಶುಪೋಷಣೆಯನ್ನೇ ಅವಲಂಬಿಸಿದ್ದರಿಂದ, ದೇವರಲ್ಲಿ ಅವರ ಬೇಡಿಕೆ ಮುಖ್ಯವಾಗಿ ಪಶುಗಳಿಗಾಗಿಯೇ ಆಗಿತ್ತು. ಅವುಗಳಿಗಾಗಿ ಯುದ್ಧಗಳು ನಡೆಯುತ್ತಿದ್ದವು. ಯುದ್ಧವೆಂದರೆ ಗೋವಿಗಾಗಿಯೇ ಯುದ್ಧವೆಂದಿದ್ದರಿಂದ 'ಗವಿಷ್ಠಿ' ಎನ್ನುವ ಪದ ಯುದ್ಧ ಎನ್ನುವ ಅರ್ಥದಲ್ಲಿ ಬಳಕೆಗೆ ಬಂದಿತು. ಆಗಿನ ಜನರಿಗೆ ಗೋವೃಷಭಗಳ ಶಬ್ದಗಳೂ ಸಹ ಬಹಳ ಇಂಪಾಗಿ ಸಂಗೀತದಂತೆ ಕೇಳಿಸುತ್ತಿದ್ದವು. ದೇವರುಗಳನ್ನು ಎತ್ತುಗಳಿಗೂ,

ದೇವತೆಯರನ್ನು ಹಸುಗಳಿಗೂ ಹೋಲಿಸಿರುವುದುಂಟು. ಹಸುವಿನ ಹಾಲು ಮತ್ತಿತರ ಪದಾರ್ಥಗಳು ದೇವರುಗಳಿಗೆ ಪ್ರೀತ್ಯರ್ಥವಾಗಿ ನೈವೇದ್ಯವೆಂದು ಅರ್ಪಿಸುತ್ತಿದ್ದರು. ಒಟ್ಟಿನಲ್ಲಿ ವೇದಕಾಲದಲ್ಲಿ ಪಶುಪೋಷಣೆಗೆ ಕೊಟ್ಟ ಪ್ರಾಮುಖ್ಯತೆಯನ್ನು ಕೃಷಿಗೆ ಕೊಟ್ಟಿರಲಿಲ್ಲ. ಅಷ್ಟೇ ಅಲ್ಲದೆ ಕೃಷಿಯ ಪ್ರಾರಂಭದ ಹಂತದಲ್ಲಿ ಆ ವೃತ್ತಿಯನ್ನು ಅವರು ನೀಚವಾಗಿ ಕಂಡರು.

ವೈದಿಕ ಆದ ಆರ್ಯರು ಮುಖ್ಯವಾಗಿ ಪಶುಪೋಷಕರಾದ್ದರಿಂದ ನೀರು ಮತ್ತು ಮೇವು ಸಮೃದ್ಧಿಯಾಗಿ ಸಿಗುವ ಜಾಗಗಳಲ್ಲಿ ವಾಸವಾಗಿದ್ದುಕೊಂಡು ತಮ್ಮ ಕೈಯಲ್ಲಿ ಯುದ್ಧದಲ್ಲಿ ಸೋತ ಸ್ಥಳೀಯ ಅರಣ್ಯವಾಸೀ ಜನರಿಗೆ ಆಹಾರೋತ್ಪಾದನೆಯನ್ನು ಬಿಟ್ಟಿಗು.

ಪಶುಪೋಷಣೆಯೇ ಮುಖ್ಯ ವೃತ್ತಿಯಾಗಿದ್ದ ಸಮಾಜದ ವ್ಯವಸ್ಥೆ ಪುರುಷ ಪ್ರಧಾನವಾದದ್ದು. ಬೇಟೆಯಾಡುವುದರಿಂದ ಪ್ರಾಣಿಗಳನ್ನು ಹಿಡಿದು ಅವುಗಳನ್ನು ಸಾಕುವುದರವರೆಗೂ ಗಂಡಸರದೇ ಜವಾಬ್ದಾರಿ, ಅವರ ವ್ಯವಹಾರಗಳಲ್ಲಿ ಪ್ರಾಣಿಗಳೇ (ಮುಖ್ಯವಾಗಿ ಹಸುಗಳು) ದುಡ್ಡಿನ ಪಾತ್ರವನ್ನೂ ಸಹ ವಹಿಸುತ್ತಿದ್ದವು. ಇಷ್ಟು ಮುಖ್ಯವಾದ ಪಶುಗಳನ್ನು ಪೋಷಿಸುವಲ್ಲಿ ನುರಿತ ಪುರುಷನೇ ಅಂದಿನ ಸಮಾಜದಲ್ಲಿ ಪ್ರಮುಖನಾದ.

ವೈದಿಕರು ಊಹಿಸಿದ ದೇವಲೋಕದಲ್ಲಿಯೂ ದೇವತೆಯರಿಗಿಂತಲೂ ದೇವರುಗಳೇ ಮುಖ್ಯರು. ಅವರು ಲೋಕಾಧಿಪತಿಗಳು. ಉದಾಹರಣೆಗೆ- ಉಷಸ್ಸು ಎಂಬ ದೇವತೆಗೆ ಯಜ್ಞಾದಿಗಳಲ್ಲಿನ ಹವಿಸ್ಸಿನಲ್ಲಿ ಪಾಲು ಸಿಗುವುದಿಲ್ಲ. ಸರಸ್ವತಿ, ಪೃಶ್ನಿ, ರಾತ್ರಿ, ವಾಕ್–ಮೊದಲಾದ ಸಾಮಾನ್ಯವಾಗಿ ಪೂಜಿಸಲ್ಪಡುವ ದೇವತೆಯರು ದೇವರುಗಳಿಗಿಂತಲೂ ಕೆಳಗಿನವರೇ. ಅವರು ತಮ್ಮ ಗಂಡಂದಿರಾದ ದೇವರುಗಳ ಮೂಲಕ ಮಾತ್ರ ಹೆಸರುವಾಸಿಯಾದರು. ಕೆಲವರ ಹೆಸರುಗಳಂತು ತಮ್ಮ ಪತಿದೇವರುಗಳ ಹೆಸರುಗಳ ಮೇಲೆ ನಿರ್ಧಾರವಾಗುತ್ತವೆ. ಇಂದ್ರನ ಹೆಂಡತಿ ಇಂದ್ರಾಣಿ. ಒಂದು ಪ್ರತ್ಯಯ ಒಬ್ಬ ದೇವರ ಹೆಸರಿಗೆ ಸೇರಿಕೊಂಡು ಅವನ ಹೆಂಡತಿಯ ಹೆಸರಾಗುತ್ತದೆ.

(ಸಶೇಷ)

# ಗೊಂಬೆಯಾಟ ಮತ್ತು ಕೋಲಾಟ: ಟಿಪ್ಪಣಿಗಳು

ಎಸ್. ಎಸ್. ಹಿರೇಮಠ

"Because we are the inheritors of all that is good for the people. Because we are the ones to improve upon the past".

"Value everything that people love". ●

## ಟಿಪ್ಪಣಿ-ಒಂದು

ಕನ್ನಡ ನಾಡಿನಲ್ಲೇ ಹಿಂದುಳಿದ ಪ್ರದೇಶಗಳಲ್ಲಿ ಬಳ್ಳಾರಿ ಜಿಲ್ಲೆ ಒಂದು. ಊಳಿಗ ಮಾನ್ಯ, ಅರೆ ಊಳಿಗಮಾನ್ಯ ಪರಿಸ್ಥಿತಿಗಳನ್ನು ಹೆಚ್ಚಾಗಿ ಉಳಿಸಿಕೊಂಡು ಬಂದಿರುವುದೆನ್ನುವುದೇ ಇಲ್ಲಿಯ ಹಿಂದುಳಿದಿರುವಿಕೆಗೆ ಕಾರಣವಾಗಿದೆ.

ಶಿಲಾಯುಗದ ಮಾನವನ ಅವಶೇಷಗಳ ಮತ್ತು ವಿಜಯನಗರದಂಥ ಸಾಮ್ರಾಜ್ಯದಾಡಳಿತವಾಗಿದ್ದ ಈ ಪ್ರದೇಶ, ಈಗಲೂ ಬೆಳವಣಿಗೆಯ ಸಾಕಷ್ಟು ಅವಕಾಶಗಳನ್ನು ಹೊಂದಿದೆ—ಸಂಪದ್ಭರಿತ ಖನಿಜ ಸಂಪತ್ತು, ನೀರಾವರಿ ಸೌಲಭ್ಯಗಳ ಸಾಧ್ಯತೆಗಳಿಂದ. ಅಂದರೆ ಪರಂಪರಾಗತವಾದ ಸಾಂಸ್ಕೃತಿಕ ರೂಪಗಳನ್ನು ಶ್ರೀಮಂತವಾಗಿ ಉಳಿಸಿಕೊಂಡು ಬಂದಿರುವುದರ ಜೊತೆಗೆ, ಆಧುನಿಕ ಪ್ರಗತಿಶೀಲ ಕಾರ್ಮಿಕ ಶಕ್ತಿಯ ಬೆಳವಣಿಗೆಯ ಸಾಧ್ಯತೆಗಳು ಕ್ರಾಂತಿಕಾರಿ ಜನತೆಯ ಸಂಸ್ಕೃತಿಗೆ ಅವಕಾಶಗಳನ್ನು ಕಲ್ಪಿಸಿವೆ. ಇದು ವಿಜಯನಗರ ಉಕ್ಕಿನ ಕಾರ್ಖಾನೆಯ ತುರ್ತಿನಲ್ಲಿಯೂ ಇರಬಹುದಾಗಿದೆ.

● ಮತ್ತು ಪುಟ 404 ಮತ್ತು 405 : Selected works- E.M.S. Namboodaripad.

ಈ ಪ್ರದೇಶದ ಇನ್ನೂ ಹಿಂದುಳಿದ ತಾಲೂಕಾದ ಹೂವಿನ ಹಡಗಲಿಯ ಹನುಮಂತ ದೇವರ ಜಾತ್ರೆಯಲ್ಲಿ ಹೋದಸಲ (1982) ಹಲವಾಗಿಲದ **ಅಭಿಮನ್ಯು ವಧೆ** ಎಂಬ ಗೊಂಬೆಯಾಟ ಮತ್ತು ಈ ಸಲದ ಮಾಡಲಗೇರಿಯರ ಕೋಲಾಟದ ಕುಣಿತಗಳು ಗಮನಾರ್ಹವೂ ಅಭ್ಯಾಸಯೋಗ್ಯವೂ ಆಗಿದ್ದವು.

ಈ ಸಾಂಸ್ಕೃತಿಕ ಕಾರ್ಯಕ್ರಮಗಳು ಜನಪದ ಸಂಸ್ಕೃತಿಯ ವಿಶಿಷ್ಟ ಕಲಾಭಿವ್ಯಕ್ತಿಗಳಾಗಿದ್ದರೂ ಈ ಪರಂಪರಾಗತ ಕಲಾಪ್ರದರ್ಶನಗಳು ತಮ್ಮ ಮೂಲಭೂತ ಕ್ರಿಯಾಶೀಲತೆಯನ್ನು ಕಳೆದುಕೊಂಡು 'ರಿಚ್ಯುವಲ್' ಆಗಿರುವುದಕ್ಕೆ ಹಲವಾರು ಕಾರಣಗಳಿವೆ.

೧) ಬದಲಾದ ಸಾಮಾಜಿಕ-ರಾಜಕೀಯ ಆರ್ಥಿಕ ವಸ್ತುಸ್ಥಿತಿಗೆ ತಕ್ಕಂತೆ ಶೀವ್ರವಾಗಿ ಬದಲಾಗುತ್ತಿರುವ ಸಾಂಸ್ಕೃತಿಕ ಪರಿಸರದ ಹಿನ್ನೆಲೆ.

೨) ಬದಲಾಗುತ್ತಿರುವ ಪರಿಸರಕ್ಕೆ ಹೊಂದಿಕೊಳ್ಳದೆ ತಮ್ಮ ಮೂಲ ರೂಪವನ್ನುಳಿಸಿಕೊಂಡು ಬರಲು ಯತ್ನಿಸುವುದೆ ತಮ್ಮ ಪವಿತ್ರ ಕರ್ತವ್ಯವೆಂದು ಭಾವಿಸಿದ ಸಾಂಪ್ರದಾಯಿಕ ಕಲೆಗಾರರು.

೩) ಧಾರ್ಮಿಕ ವಿಧಿಗಳ ಅಂಗವಾಗಿ ಕಲಾರೂಪಗಳನ್ನು ಉಳಿಸಿಕೊಂಡು ಬಂದಿರುವ ಸಾಧ್ಯತೆ.

ಇವು ಈ ಕಾರಣಗಳಲ್ಲಿ ಮುಖ್ಯವಾದುವಾಗಿವೆ. ಇದಕ್ಕೆ ಈ ಮೊದಲೆ ತಿಳಿಸಿರುವಂತೆ ಹಳ್ಳಿಗಳಲ್ಲಿ ಇಂದಿಗೂ ಉಳಿದು ಬಂದಿರುವ ಊಳಿಗಮಾನ್ಯ ವಸ್ತುಸ್ಥಿತಿಯು ಮುಖ್ಯಾಂಶವಾಗಿದೆ.

ಸಾಮಾನ್ಯವಾಗಿ ಹಳ್ಳಿಗಳಲ್ಲಿ ಈಗಲೂ ಪತ್ತಾರರು, ಕಂಬಾರರು, ಬಡಿಗರು ಮುಂತಾದ ಕರಕುಶಲಕರ್ಮಿ (artisan class) ವರ್ಗವೆ ಅಲ್ಲಿಯ ಜನಪದ (ಜಾನಪದ ?) ಕಲಾ ಪ್ರಕಾರಗಳನ್ನು ಉಳಿಸಿಕೊಂಡು, ಬೆಳೆಸಿಕೊಂಡು ಬಂದಿದೆ. ಬೇರೆ ಬೇರೆ ಜಾತಿಗಳ ದುಡಿಯುವ ಜನತೆಯ ಕೊಡುಗೆ ಜನಪದ ಸಂಸ್ಕೃತಿಯಲ್ಲಿ ಅಪಾರವಾಗಿರುವುದನ್ನು ಮರೆಯುವಂತಿಲ್ಲ. ಜಾತಿ ಜಾತಿಗಳ ವಿಶಿಷ್ಟವಾದ ಈ ರೂಪಗಳ ಅಭ್ಯಾಸ ಇನ್ನೂ ನಡೆದೇ ಇಲ್ಲ ಎನ್ನಬಹುದೇನೊ.

ಬಯಲಾಟಗಳ ಡೈರೆಕ್ಟರುಗಳು, ಗೊಂಬೆಯಾಟದ, ಕೋಲಾಟಗಳ ಸೂತ್ರ

ಧಾರರು, ಜನಪದ ಕಥೆ, ಹಾಡು ಕುಣಿತಗಳ ನಿರ್ದೇಶಕರು, ವಕ್ತಾರರು, ಕಟ್ಟಿಗೆ, ಕಲ್ಲು, ಮಣ್ಣುಗಳಲ್ಲಿ ಮೂರ್ತಿನಿರ್ಮಾಪಕರು, ಚಿತ್ರಗಾರರು, ಈ ವರ್ಗದವರೇ (artisans) ಜಾಸ್ತಿ. ಇದಕ್ಕೆ ಈ ವರ್ಗದ ಆರ್ಥಿಕ ಸಂಬಂಧ ಮತ್ತು ಆರ್ಥಿಕ ಚಟುವಟಿಕೆಯ ಸ್ವರೂಪವೂ ಕಾರಣವಿದ್ದೀತು. ನೇರವಾಗಿ ಕೃಷಿಯುತ್ಪಾದನೆಯಲ್ಲಿ ತೊಡಗದ ಈ ವರ್ಗ ಕೃಷಿಕರ ಸಾಧನೆ-ಸಲಕರಣೆಗಳ ತಯಾರಕರು, ರಿಪೇರರೂ ಆಗಿರುತ್ತಾರೆ. ಸಾಮಾನ್ಯವಾಗಿ ಶೋಷಕ ಶೋಷಿತ ವರ್ಗಗಳ ನಡುವೆ ತಮ್ಮನ್ನು ಗುರುತಿಸಿಕೊಳ್ಳಬೇಕಾಗಿದ್ದುದರಿಂದ ಎರಡೂ ವರ್ಗಗಳ ನಡುವಿನ ಸಾಂಸ್ಕೃತಿಕ ವಾಹಕರಾಗಿ ಕೆಲಸ ಮಾಡುತ್ತಾರೆ.

ಮೋಜು, ಕಿಲಾಡಿತನ, ವ್ಯಂಗ್ಯ, ಅಪಹಾಸ್ಯ, ಕಿಟಕಿ, ಕಲೆಗಾರಿಕೆ, ಕುತ್ಸಿಲ್, ಕೀಟಲೆ ಮೊದಲಾದ ಗುಣ ಸ್ವಭಾವಗಳ ಈ ಜನವರ್ಗ ಶೋಷಿತರ ದೈನ್ಯ ಭಾಗವನ್ನೇ ಸ್ಥಾಯಿಯಾಗಿ ಹೊಂದಿರುತ್ತಾರೆ. ಇದಕ್ಕೆ ಇವರ ಆರ್ಥಿಕ ಸ್ಥಿತಿ, ಸಂಬಂಧ ಕಾರಣವಾಗಿರುತ್ತದೆ.

ಹಲವಾಗಿಲಿನ ಪತ್ತಾರರ ಗುಂಪು ಗೊಂಬೆಯಾಟದ ಕೊನೆಯಲ್ಲಿ ಗೋವಿಂದನ ನಾಮಸ್ಮರಣೆ ಮಾಡಿದ್ದು, ಎದ್ದು ಕಾಣುವಂತೆ ಜನಿವಾರ ಧರಿಸಿದ್ದು (ಪಂಚಾಳ ರಾದ್ದರಿಂದ) ಮಹಾಭಾರತದ ಕಥೆಯನ್ನು ಹಾಡನ್ನು ಜನಪದ ಭಾಷೆಗಿಂತ ಎತ್ತರದಲ್ಲಿ ಆದರೆ ಶಿಷ್ಟ ಭಾಷೆಗಿಂತ ಕೆಳಮಟ್ಟದಲ್ಲಿ ಪಾಲಿಶ್ಡ ಆಗಿ ಹೇಳುತ್ತಿದ್ದುದು ಅವರ ಮಧ್ಯವಾಹಕರ ಪಾತ್ರವನ್ನು ಸ್ಪಷ್ಟಪಡಿಸುತ್ತಿತ್ತು. ಜನಪದ ಕಲೆಯ ಇಂಥ ಸ್ಥಿತಿಗಾಗಿಯೆ EMS "Some forms of culture which may appear to be "above classes" (selected works ಪುಟ 401) ಎಂದಿರುವುದು.

ಈ ಜನಪದ ರಂಗಭೂಮಿ ಶಾಮಿಯಾನ ಬಲ್ಬು ಬೆಳಕಿನಿಂದ ಅಲಂಕೃತ. ರಂಗಮಂಟಪ ಮಾತ್ರ ಸಾದಾ. ಎರಡು ಕಂಬಗಳಿಗೆ ಎದೆ ಎತ್ತರಕ್ಕೆ ಕಪ್ಪು ಬಟ್ಟೆ ಬಿಗಿದು, ಹಿಂದೆ ಗೊಂಬೆಗಳನ್ನು ಆಡಿಸಲು ಅನುಕೂಲಕರವಾಗಿ ಬೊಂಬೆ ಗಳನ್ನು ಕಟ್ಟಿಕೊಂಡಿರುತ್ತಾರೆ. ಮುಂದೆ ಎಳೆಯುವಂತೆ ಪರದೆ ಇರುತ್ತದೆ. ಆಡಿಸುವ ಕೈಗಳು ಕಾಣಿಸದಂತೆ ಮೇಲೆ ಇಳಿಬಿದ್ದ ಪರದೆ ಇರುತ್ತದೆ. ಇದು ರಂಗಸಜ್ಜಿಕೆ.

ಪರದೆಯ ಹಿಂದೆ ಮೂವತ್ತಕ್ಕೂ ಮೇಲ್ಪಟ್ಟ ಗೊಂಬೆಗಳಿರುತ್ತವೆ. ಆಯಾ ಸಂದರ್ಭಕ್ಕೆ ಅವನ್ನೆತ್ತಿಕೊಂಡು ನಾಲ್ಕುಜನ ಗೊಂಬೆ ಆಡಿಸುತ್ತಿರುತ್ತಾರೆ.

ಹಾಡುವವ, ಪಿಯಾನಪೆಟ್ಟಿಗೆ ಬಾರಿಸುವವ, ಸನಾದಿ ಊದುವವ, ಮದ್ದಲಿ ಬಾರಿಸುವವ, ಎಲ್ಲರೂ ಸೇರಿ ಒಟ್ಟು ಹತ್ತು ಜನವಾಗುತ್ತಾರೆ.

ಗೊಂಬೆಗಳ ಕೈ-ಕಾಲು ಮುಖಗಳಿಗೆ ಸಣ್ಣನೆಯ ಕರಿದಾರಗಳನ್ನು ಕಟ್ಟಿ ಮೂರು ಅಡ್ಡಗೋಲುಗಳಿಗೆ ಅವನ್ನು ಬಿಗಿದು ಆಡಿಸುತ್ತಾರೆ. ಗೊಂಬೆಗಳನ್ನು ಬಣ್ಣದ ಬಟ್ಟೆಗಳಿಂದ ರಾಜರ ರಾಣಿಯರ ಅಲಂಕಾರವಾಗುವಂತೆ ರಚಿಸಿರುತ್ತಾರೆ. ಗೊಂಬೆಗಳು ಕಟ್ಟಿಗೆಯದಿದ್ದು ಮಣ್ಣಿನ ಕಿರೀಟವಿರುತ್ತದೆ. ಕೆಲವು ಗೊಂಬೆಗಳು ಪ್ಯಾಂಟ್ ಹಾಕಿರುತ್ತವೆ. ಧೋತರ ಉಟ್ಟ ಗೊಂಬೆಗಳ ಕಚ್ಚೆ ಆಗಾಗ ಕಳಚುವುದರಿಂದ ಪ್ಯಾಂಟ್ ಹೆಚ್ಚು ಅನುಕೂಲಕರವಾಗಿ ಕಂಡಿರಬೇಕು.

ಸಿನೇಮ, ನಾಟಕ ಮುಂತಾದ ಸಮೂಹ ಮಾಧ್ಯಮಗಳ ಶ್ರೀಮಂತ ದಾಳಿಯನ್ನು ಎದುರಿಸಿ ಇನ್ನೂ ಈ ಜನಪದಕಲೆ ಅಲ್ಲಲ್ಲಿ ಉಳಿದಿರುವುದೇ ಅಚ್ಚರಿಯಾಗಿದ್ದರೆ, ಪರಂಪರೆಯಿಂದ ಬಂದ ಈ ಕಲೆ ತನ್ನ ವ್ಯಾಪಕವಾದ ಶ್ರೀಮಂತ ಅಭಿವ್ಯಕ್ತಿಯನ್ನು ಕಳೆದುಕೊಳ್ಳುತ್ತಿರುವ ಬಗ್ಗೆ ಖೇದವೂ ಆಗುತ್ತದೆ. ವಿದೇಶಗಳ, ನಮ್ಮ ನಾಡಿನ ಸಂಸ್ಕೃತಿಯ ವಿದ್ವಾಂಸರು ಈ ಕಲೆಗಳನ್ನು ಸಂಶೋಧಿಸುತ್ತಿದ್ದಾರೆ, ಅಭ್ಯಸಿಸುತ್ತಿದ್ದಾರೆ. ಅವರೆಲ್ಲರ ಕುತೂಹಲ, ಅಚ್ಚರಿ, ಅನುಕಂಪೆಯನ್ನು ಪಡೆದಿರುವ ಈ ಕಲೆ ವಿಶಾಲವಾದ ಜನಸಮೂಹಗಳ ಒಟ್ಟು ಆಕರ್ಷಣೆಯಿಂದ ವಂಚಿತವಾಗಿ ಮೂಲೆ ಸೇರುತ್ತಿದೆ. ಈ ಕಲೆಗಳ ಮೂಲಸತ್ವವನ್ನು ಉಳಿಸಿಕೊಂಡು, ಸಮಕಾಲೀನ ಮೌಲ್ಯಗಳಿಗೆ, ಪ್ರಗತಿಶೀಲ ಚಳುವಳಿಗಳಿಗೆ ತಕ್ಕಂತೆ ಅವುಗಳನ್ನು ಬೆಳೆಸಿಕೊಂಡು ಹೊಸದಾದ ಕ್ರಿಯಾಶೀಲ ಸಾಧ್ಯತೆಗಳನ್ನು ದರ್ಶಿಸಲು ಸೃಷ್ಟಿಶೀಲ ಕಲಾಸಕ್ತರು ಯತ್ನಿಸಬೇಕಾಗಿದೆ. ಅವುಗಳ ಸಮರ್ಥ ಕಲಾತ್ಮಕ ಮುನ್ನಡೆಗೆ ಇದು ಮಾರ್ಗವಾದೀತು. ಇಲ್ಲಿಯ ಸಂಗೀತದ ಮೂಲರಾಗಗಳ ಶಾಸ್ತ್ರಬದ್ಧ ಅಭ್ಯಾಸ ಶ್ರಮಪೂರ್ಣವಾದ, ಹೊಣೆಗಾರಿಕೆಯ ಕೆಲಸವೆ.

ಗೊಂಬೆಯಾಟದ ಕಲಾತ್ಮಕ ಸಾಧ್ಯತೆ, ಜನಾದರಣೀಯ ಆಕರ್ಷಕ ಸಾಮರ್ಥ್ಯ, ಪ್ರತಿಭೆಯ ಮುಂದೂಡಿಕೆಗಳ ವಿಚಾರದ ಜತೆಗೆ ಅನೂಹ್ಯವಾದ ಸಂಸ್ಕೃತಿಯ ಹತ್ತಾರು ಸಂಗತಿಗಳ ಪರಿಣಾಮದ ಅಭ್ಯಾಸವೂ ಆಗಬೇಕು.

ಆಡುವವರೆಲ್ಲ ಬಹುಶಃ ಅನಕ್ಷರಸ್ಥರು, ಅಥವಾ ಅಲ್ಪ ಅಕ್ಷರಸ್ಥ ಹವ್ಯಾಸಿ ತಂಡದವರು. ಅವರಲ್ಲಿ ಈ ಕಲೆಯ ಬಗ್ಗೆ ಸಾಂಪ್ರದಾಯಿಕ ಶ್ರದ್ಧೆಯ ಹುಚ್ಚು

ಕಂಡುಬರುತ್ತದೆಯೆ ಹೊರತು ಕಲೆಯ ಸೃಷ್ಟಿಶೀಲ ಸಾಧ್ಯತೆಗಳ ಶ್ರದ್ಧೆಯಲ್ಲ, ಅದರ ಕಲಾತ್ಮಕ ಉನ್ನತಿಗಳ ಸುಸಂಸ್ಕೃತ ತಿಳುವಳಿಕೆ ಅಲ್ಲ. ನಿರ್ದೇಶಕನ ಪ್ರಸಂಗಾವಧಾನತೆಯಿಂದಾಗಿ ಕಥೆಯನ್ನು ಹಿಗ್ಗಿಸುತ್ತ ಕುಗ್ಗಿಸುತ್ತ ಆಟವನ್ನು ಆಡಿಸಬಲ್ಲರು.

ಈ ಜನಪದ ಕಲೆಯ ಶ್ರೀಮಂತಿಕೆ ಹಲವು ಮುಖಗಳಲ್ಲಿ ವ್ಯಕ್ತವಾಗುತ್ತದೆ. ಹಿಂದುಸ್ಥಾನಿ, ಕರ್ನಾಟಕಿ ಸಂಗೀತ ಪರಂಪರೆಗಳಿಗೆ ಬಹುಶಃ ಮೂಲವಾದ ರಾಗ ಸಂಯೋಜನೆಗಳು (ಖ್ಯಾತ ಸಂಗೀತ ವಿದ್ವಾಂಸರ ಪ್ರಕಾರ–ಕರ್ನಾಟಕಿ ಹಿಂದುಸ್ಥಾನಿ ಸಂಗೀತ ಪರಂಪರೆಗಳ ಮೂಲ ಒಂದೆ ಆಗಿತ್ತು. ಮುಸ್ಲಿಂರ ಆಗಮನದ ನಂತರ ಅವರ ಸಂಸ್ಕೃತಿಯ ಪ್ರಭಾವದಿಂದ ಹಿಂದುಸ್ಥಾನಿ ಸಂಗೀತ ಹೆಚ್ಚು ಪ್ರಭಾವಿತಗೊಂಡು ವಿಭಿನ್ನ ವಿಶಿಷ್ಟತೆಯನ್ನು ಪಡೆಯಿತು. ಇಂಥ ಪ್ರಭಾವಗಳಿಂದ ದೂರವಾಗಿದ್ದ ಕರ್ನಾಟಕಿ ಸಂಗೀತ ಪರಂಪರೆ ತನ್ನ ಮೂಲ ರೂಪವನ್ನು ಬಹುಮಟ್ಟಿಗೆ ಉಳಿಸಿಕೊಂಡು ಬಂದಿದೆ.) ಹಾಡಿನ ಮಟ್ಟುಗಳು ಆಟದ ಮಹತ್ವದ ಭಾಗ. ಈ ಕಲೆಗಾರರ ಎಲ್ಲ ತಪ್ಪು ಉಚ್ಚಾರ, ಅಜ್ಞಾನ, ಅರೆಬರೆ ಅರಿವಿನ ಮಿತಿಗಳನ್ನು ಮೀರಿದ ಕಲ್ಪನೆಗಳನ್ನು ಬರಿ ನೆನಪಿನ ಶಕ್ತಿಯನ್ನು ಅವಲಂಬಿಸಿ ಕಂಠಪಾಠಮಾಡಿಟ್ಟುಕೊಂಡು ಇತ್ತ ಒಂದೆಡೆ ಮಾತು, ಹಾಡು ಹೇಳುತ್ತ ಅತ್ತ ಬೆರಳುಗಳಿಂದ ಗೊಂಬೆಯನ್ನು ಭಾವ ಸಂದರ್ಭಕ್ಕೆ ತಕ್ಕಂತೆ ಕುಣಿಸುತ್ತ ಕಲೆಯನ್ನು ಪ್ರದರ್ಶಿಸುವ ಮೋಡಿ ಅದ್ಭುತ. ಕುಣಿಸುವವರೇ ಒಂದು ರೀತಿಯಿಂದ ಪಾತ್ರಧಾರಿಗಳು. ಗೊಂಬೆಗಳ ನಟನೆಯನ್ನೆಲ್ಲ ಇವರು ಪರದೆಯ ಹಿಂದೆ ನಟಿಸುತ್ತಿರುತ್ತಾರೆ.

ಕೈಗಳಲ್ಲಿ ಇಡೀ ನಾಟಕವನ್ನು ಅಭಿನಯಿಸಿ ತೋರಿಸುವ ಅವರ ಕುಶಲತೆಗೆ ಬೆರಗಾಗುತ್ತೇವೆ. ಶೀರ ಮಿತಿಗಳಲ್ಲಿರುವ ದಾರಗಳ ಮೂಲಕ ಇಡೀ ಭಾವಗಳ ಅಭಿವ್ಯಕ್ತಿಯನ್ನು ಸಾಧಿಸಬೇಕಾಗುತ್ತದೆ.

ಕೈಗಳನ್ನು ಆಡಿಸುವ ಪಳಗಿಸುವ ತಂತ್ರ ಪ್ರಾಕ್ಟೀಸ್‌ನಿಂದ ಬಂದುದಾದರೂ ಮಾತು, ಹಾಡು, ಭಾವ ಕೈನಟನೆಗಳ ಇಡೀ ಸಂಯೋಜನೆ ಸಮಗ್ರ ಅಭಿವ್ಯಕ್ತಿಯನ್ನು ಪರೀಕ್ಷೆಗೆ ಒಡ್ಡುವಂಥದು. ಕಲೆಗೆ ಉಂಟುಮಾಡಬೇಕಾಗಿರುವ 'ಪರಿಣಾಮ'ವನ್ನು ಈ ಕಲೆ ಸಾಧಿಸುವಲ್ಲಿ ಯಾವ ಸಂಶಯುವು ಇಲ್ಲ. ಅಪವಾದಗಳೆನ್ನುವಂತೆ ಅಲ್ಲಲ್ಲಿ ಅಭ್ಯಾಸಗಳು ಕಂಡುಬರುತ್ತವೆ.

ವಸ್ತು :—ಮಹಾಭಾರತದಂಥ ರಾಷ್ಟ್ರೀಯ ಮಹಾ ಕಾವ್ಯಗಳ—(ಶೋಷಕ,

ಯಜಮಾನ ಸಂಸ್ಕೃತಿಯ ಆಕರ ಗ್ರಂಥಗಳು? "can you say that the Ramayana belongs to the category of feudal culture or bourgeios culture or peoples culture? "(ಪುಟ 401)" The Ramayana and Mahabharata and all other classical works had their original roots in the common people. "(ಪುಟ 402)" The people create culture but after the emergence of class society all the successive changes in class society in India, all that has been created by the people are being utilised by the representatives of the ruling people or the ruling elite. "(ಪುಟ 405"—ಎಲ್ಲ ಉಲ್ಲೇಖಗಳು-selected works—F.M.S.) ಈ ಕೃತಿಯ ವಿಶಿಷ್ಟ ಮೌಲ್ಯಗಳು, ಜನಪದೀಕರಣಕ್ಕೆ ಒಳಪಟ್ಟು ಕಲೆಯ ನಾನಾ ಪ್ರಕಾರಗಳಲ್ಲಿ ಪ್ರತಿ ಪಾದಿಸಲ್ಪಟ್ಟವೆ. ಈ ಕ್ರಿಯೆ ಜನಪದರಿಂದ, ಜನಪದರಿಗೆ ತಲುಪುತ್ತಿರುವ ವಿಧಾನ ವ್ಯಾಪಕ ಸ್ವರೂಪದ್ದು. ಇದನ್ನು ನೆನಸಿಕೊಂಡಾಗ ಶೋಷಕ ಪರಂಪರೆಯ ಅಗಾಧತೆ ಕಲ್ಪನೆಗೆ ಬಂದೀತು. ಜನಪದರಿಂದ ಹುಟ್ಟಿದ ಕಚ್ಚಾಸ್ಥಿತಿಯಲ್ಲಿದ್ದ ಶ್ರೇಷ್ಠವಾದದ್ದನ್ನು ಸುಂದರವಾದುದನ್ನು ಆಳುವ ವರ್ಗದ ಪ್ರತಿಪಾದಕರು ಪರಿಷ್ಕರಿಸಿ ಇದನ್ನೇ ತಿರುಗಿ ಜನರಿಗೆ ತಲುಪಿಸಲು ಬೆಳಸಿಕೊಂಡರೆ? ಅಥವಾ ಜನಪದದ ಈ ರೂಪಗಳು ಮೂಲ ರೂಪಗಳ ನೇರ ಪರಂಪರಿತ ಪ್ರತಿಗಳೋ?

ಮಹಾಭಾರತದ ರಾಜರ ಜೀವನಾನುಭವಗಳು ಈ ಗೊಂಬೆಯಾಟದಲ್ಲಿ ಬರುತ್ತವೆ. ಜನಪದ ಕಲೆಗಳಲ್ಲಿ ಆಳವಾಗಿ ಬೇರೂರಿದ ಶೋಷಕ ಸಂಸ್ಕೃತಿಯ ವೈವಿಧ್ಯಮಯ ಆಯಾಮಗಳ ಬಗ್ಗೆ ಗಂಭೀರವಾಗಿ ಯೋಚಿಸಬೇಕು. ಮಾಧ್ಯಮ ಗಳ ಮೂಲಕ ಅದು ತನ್ನ ಪ್ರಭಾವವನ್ನು, ವಿಸ್ತಾರವಾಗಿ ಹರಡುತ್ತ ಬಂದಿದೆ. ಅದರ ವ್ಯವಸ್ಥಿತ ರೀತಿಯ ಈ ಪ್ರಚಾರ ವೈಖರಿ ಅಗಾಧ. ಶತಶತಮಾನಗಳಿಂದ ಚಲನಾರಹಿತವಾದ ಸ್ಥಿರ ಸಮಾಜ ವ್ಯವಸ್ಥೆ ನಮ್ಮದು. ಅಂಥ ವ್ಯವಸ್ಥೆಯಲ್ಲಿ. ಸಾಕಷ್ಟು ವ್ಯವಸ್ಥಿತವಾಗಿ ಪರಿಪೂರ್ಣವಾಗಿ ಬೆಳೆದು ಬರಲು ಇಂಥ ಕಲೆಗಳಿಗೆ ಅವಕಾಶವಾಯ್ತು.

ಆಟದ ಮಧ್ಯದಲ್ಲಿ ಆಗಾಗ ಬರುವ 'ಹಾಸ್ಯ' ಪಾತ್ರಗಳೆಂದು ತಿಳಿಯಲಾದ ಸೈನಿಕರು, ಸಾಮಾನ್ಯರು, ಜನಪದರ ನೋವು ನಲಿವನ್ನು ಆಟದಲ್ಲಿ ನೇರವಾಗಿ ತಂದುಬಿಡುವ ಸಾಂಪ್ರದಾಯಿಕ ಪಾತ್ರಗಳು, ಮಷ್ಣಲಿಕಾರನ ಜತೆ ಸಾಮಾನ್ಯನ

ಹೆಂಡತಿ ತನ್ನ ಜೀವನದ ಕಷ್ಟ ಸುಖಗಳನ್ನು ಹೇಳಿಕೊಳ್ಳುವಳು. ಆಗಾಗ ಮದ್ದಲೆಯ ಮೇಲೆ ಹಾರಿ ಕೂತು ಮಾತನಾಡುವಳು. ಹೀಗೆ ಬೇರಾವ ಪಾತ್ರವೂ ಮದ್ದಲೆಗಾರನ ಜತೆ ಮಾತನಾಡುವುದಿಲ್ಲ ಎಂಬುದು ಗಮನಾರ್ಹ. ಆಕೆಯ ಗಂಡ ಮತ್ತು ಆವನ ಸ್ನೇಹಿತನ ನಡುವೆ ಮಾತುಕತೆ ಹೀಗಿರುತ್ತದೆ—"ನನ ಹೆಣ್ತಿ ಹೊರಗs ಬರೂದುಲ್ಲ"

"ಯಾಕ ?" ಅಷ್ಟು ಗೌರವಸ್ಥಳು, ಎಂಬ ಭಾವನೆ ಪ್ರೇಕ್ಷಕನಿಗೆ ಮೂಡಿರುತ್ತದೆ.

"ಉಡಾಕ ಸೀರಿಲ್ಲದಕ್ಕ" ಎನ್ನುತ್ತಾನೆ ಸೈನಿಕ.

ಈ ಪಾತ್ರಗಳ ವೇಷ ಭೂಷಣ ಕುಣಿತ, ಎಲ್ಲವೂ ಹಾಸ್ಯಕ್ಕಾಗಿ ಎಂಬ ಉದ್ದೇಶಪೂರ್ವಕ ಸಂಯೋಜನೆ ಕಾಣುತ್ತದೆಯಾದರೂ ಈ ವ್ಯಂಗ್ಯ ನಕಲಿಯ ಹಿಂದೆ ದುಡಿಯುವ ಜನತೆಯ ವಿಷಾದಪೂರಿತ ಬದುಕು ಭಟ್ಟಿ ಇಳಿದಿರುತ್ತದೆ.

ಈ ಪೀಳಿಗೆಯ ನಂತರ ಇವು ಈ ಸಂಗಡದವರಲ್ಲಿ ಉಳಿಯುತ್ತವೆಯೊ ಅನುಮಾನ. ಜನ ನಡುನಡುವೆ ಬೇಸರದಿಂದ ಎದ್ದುಹೋದುದು, ಇಡೀ ರಾತ್ರಿ ಆಟ ನೋಡಲು ಸಹನೆ ಕಳಕೊಂಡದ್ದು ಸಿನೇಮಾಗಳೆದುರು ಗೊಂಬೆಆಟದ ಆಕರ್ಷಣೆ ಕುಂದುತ್ತಿರುವುದಕ್ಕೆ ಸಾಕ್ಷಿ. ಆದರೆ ಇಂಥ ಸೆಮಿಫ್ಯೂಡಲ್ ಊರುಗಳಲ್ಲಿ ಪ್ರದರ್ಶಿಸಲ್ಪಡುತ್ತಿರುವುದೂ ಸಹ ಎಲ್ಲೋ 'ಹಲವರ' ಉದಾರ ಗುಣ, ಉಪಕಾರಬುದ್ಧಿಯಿಂದ ಎಂಬ ಭಾವ ಬಲಿತಿದೆ.

ಇಂಥ ಆಟಗಳು ತೋರಿಸುವ ಸಮಾಜ ಪದ್ಧತಿ, ವ್ಯವಸ್ಥೆಯ ನಾಶವಾಗಿ ಹೋಗಿದ್ದರೂ (ರಾಜಶಾಹಿ) ಆ ಮೌಲ್ಯಗಳ ಅವಶೇಷಗಳು, ಫ್ಯೂಡಲ್ ಅವಶೇಷಗಳು ಇನ್ನು ಉಳಿದಿರುವುದರಿಂದ ಅಷ್ಟಿಷ್ಟು ಆಕರ್ಷಣೆ ಉಳಿದಿದೆ. ಆದರೆ ದೀರ್ಘವಾದ ಅನಿವಾರ್ಯ ಅಂಗವಾದ ತಿಳಿಯದ ಹಾಡುಗಳು, ಮಾತುಗಳ ಸಂಸ್ಕೃತ ಭೂಯಿಷ್ಟ ಕೃತಕತೆ, ಶೈಲಿ ಎಲ್ಲವೂ ಕಲೆಯನ್ನು ರಿಚುವಲ್ ಆಗಿಸುವ ಅಂಶಗಳಾಗಿವೆ.

ಕಲೆಗಳು ರಿಚ್ಯುವೆಲ್ ಆಗುವುದು ಸಾಮಾಜಿಕ ದುರಂತವೇನಲ್ಲ. ಬದಲಾಗುತ್ತಿರುವ ಮೌಲ್ಯಗಳಿಗೆ ತಕ್ಕಂತೆ ಇವು ಹೇಗೆ ರೂಪಾಂತರಗೊಳ್ಳಲು ಸಾಧ್ಯ ಎಂಬುದು ಮಾತ್ರ ಚಿಂತನೀಯ. ಇದಾಗದೆ ಹೋಗುತ್ತಿರುವುದೇ ದುರಂತ.

ಆದರೆ ಜನಪದ ಚಳುವಳಿಗಳು ತೀವ್ರವಾಗಿರುವ ಕೇರಳ, ಆಂಧ್ರ, ಬಂಗಾಲ ದಂಥ ಕಡೆ ಜನಪದ ಕಲಾರೂಪಗಳಲ್ಲಿ (ಬುರ್ರಕಥಾ, ಮಂ) ಈ ಕೆಲಸ ಆಗಿರುವುದನ್ನು ಗಮನಿಸಬಹುದು.

ಗೊಂಬೆಗಳ ಕುಣಿತವು ದೊಡ್ಡಾಟಗಳ ಕುಣಿತವನ್ನೇ ಹೋಲುತ್ತವೆ. ಮಾತು ಹಾಡು ಅದೇ ರೀತಿ. ಆದರೆ ಆಯಾಪಾತ್ರಗಳ ವಿಭಿನ್ನ ವ್ಯಕ್ತಿತ್ವ ವೈಶಿಷ್ಟ್ಯತೆಯನ್ನು ಬರಿ ವೇಷ ಅಲಂಕಾರದಲ್ಲಷ್ಟೇ ಅಲ್ಲ ನಟನೆಯಲ್ಲೂ ಭಾಷೆ, ಭಾವಾಭಿವ್ಯಕ್ತಿಯಲ್ಲೂ ತೋರಿಸುವ ಯತ್ನ, ಆಡಿಸುವವರ ತನ್ಮಯತೆ, ಇವು ಅವರ ಪ್ರತಿಭೆಗೆ ದ್ಯೋತಕಗಳು.

## ಟಿಪ್ಪಣಿ–ಎರಡು

**ಕೋಲಾಟ**—ಹಡಗಲಿಯ ಹನುಮಂತನ ಈ ವರ್ಷದ ಕಾರ್ಯಕ್ರಮಗಳಲ್ಲಿ ಒಂದು ಹಳ್ಳಿಯ ಕೋಲಾಟದವರ ಕುಣಿತಗಳು ತುಂಬ ಆಕರ್ಷಕವೂ ಅಭ್ಯಸನೀಯವೂ ಆಗಿದ್ದವು.

ತಾಸುಗಟ್ಟಲೆ, ವಿರಾಮವಿಲ್ಲದೆ ಉತ್ಸಾಹಿ ಮುದುಕನೊಬ್ಬನ ಮಧ್ಯಸ್ಥಿಕೆಯಲ್ಲಿ ಸುಮಾರು ಹದಿನಾರು ಜನ ಹಳ್ಳಿಗರು ಅನೇಕ ಗತ್ತು ಗಾಡಿಗಳಲ್ಲಿ, ಶೈಲಿ ಭಂಗಿಗಳಲ್ಲಿ ಪ್ರತಿ ಹಾಡಿಗೂ ವಿಭಿನ್ನವಾಗಿ ಕಲಾತ್ಮಕ ಅದ್ಭುತ ಅಭಿವ್ಯಕ್ತಿಯಾಗುತ್ತಿದ್ದರು. ದುಡಿಯುವ ಹಳ್ಳಿಯ ಈ ಜನರಲ್ಲಿ ಅದೆಂಥ ಅಗಾಧ ಕಲೆ ಮೈಗೂಡಿಕೊಂಡಿದೆ ಎಂದು ಅಚ್ಚರಿಯಾಗುತ್ತದೆ. ನಾಡಿನ ಯಾವ ಯಾವುದೋ ಮೂಲೆಗಳಲ್ಲಿ ಎಂಥೆಂಥ ಅದ್ಭುತ ಕಲೆಗಾರಿಕೆ ಪ್ರಚಾರ, ಅಭ್ಯಾಸ ಇಲ್ಲದೆ ಹೋಗುತ್ತಿದೆಯಲ್ಲ ಎಂಬ ಸಂಗತಿ ವಿಷಾದವನ್ನು ಆಳವಾಗಿಸುತ್ತದೆ.

ಈ ಕಲೆಯೂ ಸಹ ಕ್ರಿಯಾಶೀಲತೆಯನ್ನು ಕಳೆದುಕೊಂಡು ಯಾಂತ್ರಿಕ ಮತ್ತು ಅದೇ ಧಾರ್ಮಿಕ ನಂಬಿಕೆ, ವಿಶ್ವಾಸಗಳ, ವಿಧಿಗಳ ಅಭಿವ್ಯಕ್ತಿಗಳೇ ಆಗಿದ್ದರೂ ಕೂಡ (ಸಾಹಿತ್ಯ ಕಲೆಯೂ ಹೀಗೆ ಆಗುತ್ತ ಬಂದಿದೆಯಲ್ಲವೆ?) ಪರಂಪರೆಯಾಗಿ ಈ ಕಲೆಯನ್ನು ಜನ ಮುಂದೊರಿಸಿಕೊಂಡು ಬರುತ್ತಿದ್ದಾರೆಂಬುದು ಗಮನಾರ್ಹ. ಮತ್ತು ಹಿಂದಿನ ಸಾಂಸ್ಕೃತಿಕ ಬಳುವಳಿಯಾಗಿ ಇವು ಉಳಿದು ಬರುತ್ತಿವೆ. ಇದಕ್ಕಾಗಿ ಇವರಿಗೆ ಕೃತಜ್ಞರಾಗಿರಬೇಕು ಮತ್ತು ಇವುಗಳ ರೂಪ ವಸ್ತುಗಳನ್ನು ಅಭ್ಯಸಿಸಬೇಕು.

ಹನುಮಂತ, ರಾಧಾಕೃಷ್ಣ, ಗೋಪಿಕೃಷ್ಣ, ಗಂಗೆ, ಗೌರಿ, ಶಿವ ಮುಂತಾದ ದೇವತೆಗಳಿಗೆ ಸಂಬಂಧಿಸಿ ಇವರು ಕುಣಿತಕ್ಕೆ ತಕ್ಕ ಹಾಡು, ಹಾಡಿಗೆ ತಕ್ಕ ಕುಣಿತವನ್ನು ಕಾಣಿಸುತ್ತಾರೆ. ಭಾವ ಮತ್ತು ಅಭಿವ್ಯಕ್ತಿ ಕ್ರಮಗಳಲ್ಲಿ ತೋರುವ ಸಾಂಗತ್ಯ, ಸುಸಂಬದ್ಧತೆ ಯೋಗ್ಯವಾಗಿರುತ್ತದೆ.

ಹೊಸಪೇಟೆಯ ವಾಲ್ಮೀಕಿ ಜನರ ಕೋಲಾಟದ ಕುಣಿತಕ್ಕಿಂತ ಇವರ ಕೋಲಾಟದಲ್ಲಿ ಸಂಯಮ ಎದ್ದು ಕಾಣುತ್ತದೆ. ಹೆಜ್ಜೆಹೆಜ್ಜೆಗೂ ಬೆಳೆಸುತ್ತ ಹೋಗಿ ಕುಣಿತಕ್ಕೆ ಒಂದು ಹಂತವನ್ನು ನಿರ್ಮಿಸುವ ಸಹನೆಯ ವಿಧಾನ ಇವರಲ್ಲಿ ಕಂಡುಬರುತ್ತದೆ. ಇದರಿಂದಾಗಿ ಇದು ಕುಣಿತದ ನಾನಾ ವಿಧಗಳಲ್ಲೂ ವಿಸ್ತಾರ, ವಿಶೇಷತೆಗಳನ್ನು ತುಂಬಿಕೊಂಡಿದೆ. ಈ ಕಲೆಯ ನಾನಾ ಸಾಧ್ಯತೆಗಳನ್ನು ಮನಗಾಣಿಸಿಕೊಡುತ್ತದೆ.

ಮಧ್ಯದಲ್ಲಿ ಇಬ್ಬರು. ಮುದುಕನೊಬ್ಬ ತನ್ಮಯನಾಗಿ ಗತ್ತಿಗೆ ತಕ್ಕ ಹೆಜ್ಜೆ ಹಾಕುತ್ತ ಹಾಡಿನ ನಿರ್ದೇಶಕನೂ ಆಗಿರುತ್ತಾನೆ. ಕಟಕಟ (ಕಟ್ಟಿಗೆಯ ಒಂದು ವಾದ್ಯ ವಿಶೇಷ) ಯನ್ನು ಬಾರಿಸುತ್ತಿರುತ್ತಾನೆ. ಮತ್ತೊಬ್ಬ ತಾಳ ಬಾರಿಸುತ್ತ ಇವನಿಗೆ ಸಾಥಿಯಾಗಿರುತ್ತಾನೆ.

ಇವರದು ಚೆನ್ನಾಗಿ ಪಳಗಿದ ಗುಂಪು. ಆ ಊರ ಪ್ರಾಥಮಿಕ ಶಾಲೆಯ ಮಾಸ್ತರರೊಬ್ಬರು ಆಗಾಗ ನಡುವೆ ಹೋಗಿ ಮುದುಕನ ಕಿವಿಯಲ್ಲಿ ಗುನುಗುನಿಸಿ ಆರೇದವರಂತೆ ಬರುತ್ತಿದ್ದರು. ಇವರೇ ಗುಂಪನ್ನು ದಿಲ್ಲಿವರೆಗೆ ಪ್ರದರ್ಶಿಸಿ ತಂದವರೆಂದು ಕೇಳಿದೆ.

ಪುರಾಣ ದೇವತೆಗಳ ಪ್ರಸಂಗಗಳು ಇವರ ಹಾಡಿಗೆ, ಗತಿಗೆ, ಕುಣಿತಕ್ಕೆ ವಸ್ತು. ಕ್ರಿಯಾಶೀಲ ಕಲೆಯ ನಾನಾ ರೂಪಗಳು ಸಾಂಪ್ರದಾಯಿಕ–ರಿಚ್ಯುವಲ್–ಕರ್ಮಗಳಾಗಿ ಪರಿವರ್ತನೆಯಾಗುತ್ತಿರುವುದು ಇಲ್ಲೂ ಗಮನಾರ್ಹ ಸಂಗತಿಯಾಗಿತ್ತು.

ಧಾರ್ಮಿಕ ಪದ್ಧತಿಗಳನ್ನು ಕುರುಡಾಗಿ ಅನುಸರಿಸುವ ರೀತಿಯಲ್ಲೇ ಧಾರ್ಮಿಕ ಪದ್ಧತಿಯ ಭಾಗವಾಗಿಯೇ ಈ ಕಲೆಯನ್ನೂ ಪ್ರದರ್ಶಿಸುತ್ತಾರೆ. ಈ ಕಲೆಯ ಬಗೆಗಿರುವ ಅವರ ತಿಳುವಳಿಕೆ ಬಹುಶಃ ಕಡಮೆ. ಗುರುಗಳಿಗೆ ಕುರುಡಾಗಿ ಪಾಠ ಒಪ್ಪಿಸುವ ಮುಗ್ಧ ಶಿಷ್ಯರ ಕ್ರಮ ಇವರದ್ದು. ಈ ಕಲೆಯನ್ನು ನಿಷ್ಠಾವಂತಿಕೆಯಿಂದ ಕಲಿತು ಒಪ್ಪಿಸುತ್ತ, ಉಳಿಸಿಕೊಂಡು ಹೋಗುತ್ತಿದ್ದಾರೆಂಬುದರಲ್ಲಿ ಇವರು ಪ್ರಾಮಾಣಿಕರು.

ಕೊನೆಗೆ ಒಂದು ಮಾತು : ಕಲೆಗಳನ್ನು ಧಾರ್ಮಿಕ ವಿಧಿಯ ಅಂಗಗಳನ್ನಾಗಿ ಮಾಡಿರುವುದಕ್ಕೂ, ಕಲೆ ರಿಚ್ಯುವಲ್ ಆದುದಕ್ಕೂ ಮಾರ್ಕ್ಸ್ ಭಾರತದ ಬಗ್ಗೆ ಬರೆಯುವಾಗ ಹೇಳಿದ ಚಲನರಾಹಿತ್ಯಕ್ಕೂ ಸಾಪೇಕ್ಷ ಸಂಬಂಧವಿದೆ. ಇದೆಲ್ಲದರ ವಿವರ ಮತ್ತೊಂದು ಲೇಖನದ ವಿಷಯ.

## ಪುಸ್ತಕ ವಿಮರ್ಶೆ

# ದೇವಾಲಯಗಳು ಮತ್ತು ಲೈಂಗಿಕ ಶಿಲ್ಪ :

ಲೇ : ತಾಪಿ ಧರ್ಮಾರಾವು

ಅ: ರವಿ ಬಿಳಿಗೆರೆ, ಪ್ರ : ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು-9

ನಮ್ಮ ನಾಡಿನ ಪ್ರಸಿದ್ಧ ದೇವಾಲಯಗಳ ಪ್ರಾಕಾರದಲ್ಲಿ ಮಿಥುನ ಶಿಲ್ಪವನ್ನು ಸರ್ವೇ ಸಾಮಾನ್ಯವಾಗಿ ಕಾಣಬಹುದು. ಪ್ರವಾಸಿಗಳ ಕುತೂಹಲದ ಪ್ರಶ್ನೆಗಳಿಗೆ ಅಲ್ಲಿರುವ 'ಗೈಡು'ಗಳು ಸಾಮಾನ್ಯವಾಗಿ ಕೊಡುವ ಉತ್ತರ : ಭಕ್ತರು ಕಾಮವನ್ನು ಕುರಿತ ಯೋಚನೆಗಳನ್ನು ದೇವಾಲಯದ ಹೊರಗೇ ಬಿಟ್ಟು ನಿರ್ಮಲ ಮನಸ್ಸಿನಿಂದ ದೇವರ ಸನ್ನಿಧಿಗೆ ಹೋಗಲೆಂಬುದು ಇವು ಇಲ್ಲಿರುವುದರ ಉದ್ದೇಶ. ಆದರೆ ಕಾಮಕಲೆಯ ಎಲ್ಲ ಉದ್ರಿಕ್ತ ಭಂಗಿಗಳನ್ನು ಅಭಿನಯಿಸುವ ಆ ಶಿಲಾ ಸ್ತ್ರೀ ಪುರುಷರನ್ನೂ ಅವುಗಳನ್ನು ನೋಡಿಯೂ ನೋಡದಂತೆ ನಟಿಸುತ್ತ, ಮಿಣ್ಣಗೆ ನಾಚುತ್ತ ಸಾಗುವ ಚೆಂದುಳ್ಳಿ ಹುಡುಗಿಯರನ್ನೂ ದೇವರಿಗಿಂತ ಮುಂಚೆಯೇ ಕಾಣುವ ಯಾರಾದರೂ ಕಾಮವನ್ನು ಯೋಚನೆಯಲ್ಲಾದರೂ ದೂರ ಮಾಡುವುದು ಹೇಗೆ ?

ದೂರ ಮಾಡುವ ಅಗತ್ಯವೇ ಇರಲಿಲ್ಲ ನಮ್ಮ 'ಸನಾತನಿ'ಗಳಿಗೆ ಎನ್ನುತ್ತಾರೆ ಧರ್ಮಾರಾವು ತಮ್ಮ ಕಿರುಪುಸ್ತಕ "ದೇವಾಲಯಗಳು ಮತ್ತು ಲೈಂಗಿಕ ಶಿಲ್ಪ"ದಲ್ಲಿ. ವ್ಯತಿರಿಕ್ತವಾಗಿ ಮಿಥುನ ಶಿಲ್ಪದ ಮುಖ್ಯ ಮತ್ತು ಒಂದೇ ಉದ್ದೇಶ-ಭಕ್ತ-ಕಾಮಿನಿಯರನ್ನು ಅರಳಿಸಿ, ಭಕ್ತರನ್ನು ಉದ್ರೇಕಿಸಿ 'ಸಂಗಮ' ಸಾಂಗವಾಗಿ ನೆರವೇರುವಂತೆ ಮಾಡುವುದೇ ಆಗಿತ್ತು. ಸೃಷ್ಟಿ ಕ್ರಿಯೆಯಲ್ಲಿ ಎಡೆಬಿಡದೆ ತೊಡಗಿದ್ದು ದಣಿದ ದೇವನಿಗೆ ಹೆಗಲೆಣೆಯಾಗಿ ಕಾಮಾರ್ಜನೆಯಲ್ಲಿ ತೊಡಗಿ ದೇವನಿಗೆ ವಿಶ್ರಾಂತಿಯಿತ್ತು ತಾವು ಕೃತಕೃತ್ಯರಾಗುತ್ತಿದ್ದರು ಹಿಂದಿನ ಗಂಡು ಹೆಣ್ಣುಗಳು. ಇಂತಹ ಪವಿತ್ರ ಸಾಮುದಾಯಿಕ ಚಟುವಟಿಕೆಗೆ ದೇವಾಲಯಕ್ಕಿಂತ ಪ್ರಶಸ್ತ ಸ್ಥಳ ಯಾವುದಿರಬಹುದಿತ್ತು ?

ಈ ಅಭಿಪ್ರಾಯಗಳು ಇಂದಿನ ಆಸ್ತಿಕರನ್ನೂ, ಅರ್ಚಕರನ್ನೂ ಕೆರಳಿಸ ಬಹುದಾದರೂ ಕೇವಲ ಕ್ರಿ.ಪೂ. 4–5 ಶತಮಾನಗಳಷ್ಟು ಹಿಂದಿನ ಮಾನು ಕುಲದ ಇತಿಹಾಸದಲ್ಲಿ ತಮ್ಮ ವಾದಕ್ಕೆ ಸಮರ್ಥನೆಯಿದೆ ಎನ್ನುತ್ತಾರೆ ಲೇಖ ಕರು. 140 ಪುಟಗಳ ಈ ಪುಟ್ಟ ಪುಸ್ತಕದಲ್ಲಿ ತಮ್ಮೆಲ್ಲ ವಾದಗಳಿಗೆ ವ್ಯಾಪಕ ಆಧಾರ ಒದಗಿಸಲು ಸಾಧ್ಯವಾಗದಿದ್ದರೂ ಅಧಿಕೃತ, ಸರ್ವಮಾನ್ಯ ಆಕರ ಗ್ರಂಥ ಗಳ ಪಟ್ಟಿಯೊದಗಿಸಿದ್ದಾರೆ ಕೊನೆಯಲ್ಲಿ. ಕಾಲಕ್ರಮದಲ್ಲಿ ಆಚಾರಗಳ ಮೂಲಾ ರ್ಥಗಳು ಅಳಿದಿದ್ದರೂ ಕೆಲ ಬದಲಾವಣೆಗಳೊಂದಿಗೆ ಆಚಾರಗಳು ಉಳಿದಿವೆ ಯೆನ್ನುತ್ತಾರೆ. ಇಂದಿನ ದೇವದಾಸಿ ಪದ್ಧತಿ, ಸುಗ್ಗಿಪೂಜೆ, ನಾಗಾಶ್ವತ್ಥಪೂಜೆ, ತೀರ ಪ್ರಚಲಿತವಾಗಿರುವ ಲಿಂಗ ಪೂಜೆಗಳೆಲ್ಲವೂ ಲೈಂಗಿಕ ಆರಾಧನೆಯ ಪಳೆ ಯುಳಿಕೆಗಳೆಂದು ಲೇಖಕರ ಪ್ರತಿಪಾದನೆ.

ಈ ಪುಸ್ತಕದಲ್ಲಿ ಲೇಖಕರ ಇನ್ನೊಂದು ಆಶಯವೂ ವ್ಯಕ್ತವಾಗಿದೆ: ಅದು ಸಂಶೋಧಕನೊಬ್ಬ ತನ್ನ ಕೆಲಸದಲ್ಲಿ ವಹಿಸಬೇಕಾದ ಎಚ್ಚರವನ್ನು ಕುರಿತದ್ದು. "ದೇವಾಲಯಗಳಲ್ಲಿ ಲೈಂಗಿಕ ಶಿಲ್ಪವೇಕೆ ?" ಈ ಪ್ರಶ್ನೆಗೆ ಯಾತ್ರಾ ಸ್ಥಳಗಳಲ್ಲಿರುವ ಸ್ವಯಂಘೋಷಿತ 'ಗೈಡುಗಳು' ಕೊಡುವ ಉತ್ತರ 'ಟೂರಿಸ್ಟ್' ಗಳಿಗೆ ಮಾತ್ರ ಸಮಾಧಾನ ನೀಡಬಹುದು. ಸಂಶೋಧಕನೊಬ್ಬ ಈ ಪ್ರಶ್ನೆಗೆ ಉತ್ತರ ಹುಡುಕುವಾಗಲೂ 'ಪಂಡಿತ(ರ)' ಗೈಡುಗಳು ಅವನ ನೆರವಿಗೆ ಒದಗ ಬಹುದು. ತನಗೆ ದೊರಕುವ ಆಧಾರಗಳೂ, ಆಕರಗ್ರಂಥಗಳೂ ಅಧಿಕೃತವೇ, ಮೌಲಿಕವೇ, ವಿಶ್ವಸನೀಯವೇ ಎಂದೂ ಸಂಶೋಧಕ ವಿಚಾರಿಸಬೇಕಾಗುತ್ತದೆ. ತಪ್ಪಿದಲ್ಲಿ ಅವನ ಅತ್ಯಂತ ಮೌಲಿಕ ಗ್ರಹಿಕೆಗಳೂ ಆಧಾರ ಆಕರಗಳ ಪೊಳ್ಳು ತನದಿಂದಾಗಿ ತಿರಸ್ಕೃತವಾಗುತ್ತವೆ. ಪದಗಳ ಮೂಲವನ್ನು ಶೋಧಿಸುವಲ್ಲಿ, ಪರಿಕಲ್ಪನೆಗಳನ್ನು ಪರಿಷ್ಕರಿಸುವಲ್ಲಿ ಇಂತಹ ಎಚ್ಚರವನ್ನು ಸ್ವತಃ ವಹಿಸುವ ಮೂಲಕ ಧರ್ಮಾರಾವು ತಮ್ಮ ಸಂಶೋಧನಾ ವಿಧಾನದ ಪ್ರಾಯೋಗಿಕ ಪರಿ ಚಯವನ್ನೂ ಓದುಗರಿಗೆ ಮಾಡಿಕೊಡುತ್ತಾರೆ. ಇದು ಈ ಪುಟ್ಟ ಪುಸ್ತಕದಿಂದ ದೊರಕುವ ದೊಡ್ಡ ಪ್ರಯೋಜನ.

'ಎಡಿತ್ ಹಂಟಿಂಗ್ಟನ್'

* * *

**ನೀಳ್ಗತೆಗಳು**—ಲೇ : ಲಿಯೋ ತೊಲ್‌ಸ್ತೋಯ್, ಅನು : ಕೆ. ಎಲ್. ಗೋಪಾಲಕೃಷ್ಣರಾವ್, ಪ್ರಗತಿ ಪ್ರಕಾಶನ, ಮಾಸ್ಕೋ.

ತೊಲ್‌ಸ್ತೋಯ್‌ರವರ ನಾಲ್ಕು ನೀಳ್ಗತೆಗಳು ಇಲ್ಲಿ ಸಂಕಲಿತವಾಗಿವೆ. ಮನುಷ್ಯಜೀವಿಯ ನೈಜ ಸ್ವರೂಪವನ್ನು ಕೆದಕಿ ತೆಗೆಯುವುದೇ ಇಲ್ಲಿನ ಕತೆಗಳ ಮುಖ್ಯ ಕಾಳಜಿಯಾಗಿದೆ. ಒಂದು ನಿರ್ದಿಷ್ಟ ಪರಿಸರದಲ್ಲಿ ತನ್ನ ಪ್ರತಿಷ್ಠೆ ಹಾಗೂ ಅಹಮಿಕೆಗಾಗಿ ಮನುಷ್ಯ ಹೇಗೆ ವಿವಿಧ ಮುಖವಾಡಗಳನ್ನು ಧರಿಸುತ್ತಾನೆ ಮತ್ತು ಅದರ ಅರಿವು ಬಂದೊಡನೆಯೇ ಹೇಗೆ ಕಳವಳ ಹೊಂದುತ್ತಾನೆ ಎಂಬುದು ಇಲ್ಲಿ ಸ್ಥಾಯಿಯಾಗಿದೆ. ಕತೆಗಾರರ ಶೋಧಕ ಕಣ್ಣು ಈ ಮುಖವಾಡಗಳನ್ನು ಕಿತ್ತು ಮನುಷ್ಯ ನಿಜವಾಗಿ ಏನು ಎಂಬುದನ್ನು ಕಾಣಲು ಯತ್ನಿಸುತ್ತದೆ. ಒಬ್ಬ ವ್ಯಕ್ತಿ ಇತರ ವ್ಯಕ್ತಿಗಳೊಡನೆ, ಸಮಾಜದೊಡನೆ, ಹೆಂಡತಿ–ಮಕ್ಕಳೊಡನೆ, ದೇವರೊಡನೆ ಇಟ್ಟುಕೊಳ್ಳುವ ಸಂಬಂಧದ ಸತ್ಯಾಸತ್ಯತೆ ತೊಲ್‌ಸ್ತೋಯ್‌ರವರ ಮನಸ್ಸನ್ನು ಸೆಳೆದುಕೊಳ್ಳುತ್ತದೆ. ಸ್ವಾರ್ಥಕ್ಕಾಗಿ ಈ ಸಂಬಂಧಗಳು ಸುಳ್ಳಾದಾಗ ಮನುಷ್ಯ ತನ್ನ ಆತ್ಮವಂಚನೆಯನ್ನೇ ನಿರಂತರವಾಗಿ ಮಾಡಿಕೊಳ್ಳುತ್ತಿರುತ್ತಾನೆ ಎಂಬ ನಿಲುವು ಕತೆಗಾರರದ್ದಾಗಿದೆ. ಸುಳ್ಳು ವ್ಯಕ್ತಿತ್ವದ ಕೋಟೆ ಕಳಚಿ ಬಿದ್ದಂತೆಯೇ ವ್ಯಕ್ತಿ ತಲ್ಲಣಗೊಳ್ಳುತ್ತಾನೆ; ಆದರೆ ಕ್ರಮೇಣ ಸತ್ಯದೊಡನೆ ಮುಖಾಮುಖಿಯಾಗುತ್ತಾನೆ. ಈ ವಸ್ತುವನ್ನು ತೊಲ್‌ಸ್ತೋಯ್ ಬಳಸುವುದರಿಂದ ಅವರಿಗೆ ಸತ್ಯಶೋಧನೆಯೇ ಅಂತಿಮ ಗುರಿಯಾಗುತ್ತದೆ. ಈ ಗುರಿಯನ್ನು ಸಾಧಿಸುವಲ್ಲಿ ಕತೆಗಾರರ ಒಳಗಿನ ನೈತಿಕವಾದಿ ಹೊರಬರುತ್ತಾನೆ. ಬದುಕು, ಸಾವು, ಪ್ರೀತಿ, ಮದುವೆ, ಧರ್ಮ, ಕೆಲಸ ಇವುಗಳ ಬಗ್ಗೆ ತೊಲ್‌ಸ್ತೋಯ್‌ರವರ ನೈತಿಕ ದೃಷ್ಟಿ ಮೊನಚಾಗಿದೆ. ಹೀಗಾದರೂ ಎಲ್ಲ ಕತೆಗಳಿಗೂ ಒಂದು ಗಟ್ಟಿ ಸಾಮಾಜಿಕ ಆವರಣ ಪ್ರಾಪ್ತವಾಗಿರುವುದರಿಂದ ಯಾವ ಕತೆಯೂ ಕೇವಲ ವ್ಯಾಖ್ಯೆಯಾಗದೇ ನಿಲ್ಲುತ್ತದೆ. ಪ್ರಬಂಧದ ಧ್ವನಿ ಹೆಚ್ಚಾಗದ ಹಾಗೆ ಘಟನೆಗಳೂ ಪಾತ್ರಗಳೂ ತಾರ್ಕಿಕವಾಗಿ ಬೆಳೆಯುತ್ತವೆ. ಇದು ತೊಲ್‌ಸ್ತೋಯ್‌ರವರು ಕಲಾಕಾರರಾಗಿಯೂ ಪಡೆದಿರುವ ಆಯಾಮವನ್ನು ಸೂಚಿಸುತ್ತದೆ.

ಈ ನಾಲ್ಕೂ ಕತೆಗಳಲ್ಲಿ ಒಡಮೂಡುವ ಒಂದು ನಮೂನೆಯನ್ನು ಗುರುತಿಸಬಹುದು—ಎಲ್ಲಾ ನಾಯಕರೂ ಮೇಲ್ವರ್ಗದವರು, ಮಹತ್ವಾಕಾಂಕ್ಷಿಗಳು, ಅಹಂಕಾರಿಗಳು, ಸ್ವಾರ್ಥಸಾಧನೆಗಾಗಿ ಸೋಗು ಹಾಕುವವರು, ಬೂಟಾಟಿಕೆಯಿಂದ ಬಳಲುವವರು, ನೈತಿಕ ಸಂಕಟವನ್ನು ಅನುಭವಿಸುವವರು, ಕ್ರಮೇಣವಾಗಿ ನೈಜ ಸ್ವರೂಪವನ್ನು ತಿಳಿಯುವವರು ಮತ್ತು ಅಂತಿಮವಾಗಿ ಸತ್ಯದೆಡೆ

ಕೈಚಾಚುವವರು. ಈ ನಮೂನೆಯನ್ನು ಕತೆಗಾರರು ಎಲ್ಲೂ ಸರಳೀಕೃತಗೊಳಿಸದೆ, ವಿಭಿನ್ನ ಸನ್ನಿವೇಶಗಳ ಹಿನ್ನೆಲೆಯಲ್ಲಿ ಎಲ್ಲಾ ಸಂಕೀರ್ಣತೆಯೊಂದಿಗೆ ಚಿತ್ರಿಸುತ್ತಾರೆ.

"ಇವಾನ್ ಇಲ್ಯಿಚರ ಸಾವು" ಎಂಬ ಕತೆಯಲ್ಲಿ ಒಬ್ಬ ನ್ಯಾಯಾಧೀಶ ತನ್ನ ಸ್ಥಿತಿಯ ಬಗ್ಗೆ ಅರಿವನ್ನು ಬೆಳಸಿಕೊಂಡು ಸಾವಿನ ಅನಿವಾರ್ಯತೆಯನ್ನು ಎದುರಿಸುತ್ತಾನೆ. ಸುಳ್ಳುವ್ಯಕ್ತಿತ್ವದ ದ್ವಂದ್ವಗಳು, ನೈತಿಕ ಪ್ರಶ್ನೆಗಳು ಇಲ್ಲಿ ವಿಶ್ಲೇಷಣೆಗೆ ಒಳಗಾಗಿವೆ. "ಕ್ರೋಯ್ಯಾತ್ಸೆರ್ ಸೊನಾಟ" ಎಂಬ ಸ್ವಗತ ಧಾಟಿಯ ಕತೆ ವೈವಾಹಿಕ ಜೀವನದ ಬೂಟಾಟಿಕೆಯನ್ನು ಬಯಲಿಗೆಳೆಯುತ್ತದೆ. ಪ್ರೀತಿ, ಮದುವೆ, ಲೈಂಗಿಕತೆ, ಸಂಸಾರ ಇವೆಲ್ಲಾ ಸುಳ್ಳಾಗುವ ಕ್ರಮ ಮತ್ತು ಅದರ ಪರಿಣಾಮಗಳನ್ನು ಕತೆಗಾರರು ತಮ್ಮ ಚಿಕಿತ್ಸಕ ಪರೀಕ್ಷೆಗೆ ಗುರಿಪಡಿಸಿದ್ದಾರೆ. ಗಂಡು-ಹೆಣ್ಣಿನ ಸಂಬಂಧದ ಬಗ್ಗೆ ಗಾಢವಾಗಿ ಚಿಂತಿಸಿ ಬರೆದಿರುವ ಕತೆ ಇದು. "ಫಾದರ್ ಸೆರ್ಗಿಯಸ್" ಕತೆಯಲ್ಲಿ ಪಾದ್ರಿಯೊಬ್ಬ ತನ್ನ ಹಾಗೂ ದೇವರ ಸಂಬಂಧ ಕೊಳಕಾಗುತ್ತಾ ಹೋಗುತ್ತಿರುವುದನ್ನು ಗಮನಿಸಿ ಭೀತನಾಗಿ, ಕೊನೆಗೆ ಅತ್ಯಂತ ವಿನಯಶಾಲಿಯಾಗಿ ತನ್ನತನವನ್ನು ಕಂಡುಕೊಳ್ಳುತ್ತಾನೆ. ನಿಜವಾದ 'ತನ್ನತನ' ಎಂದರೆ 'ತನ್ನತನ'ವನ್ನು ಕಳೆದುಕೊಳ್ಳುವುದು ಎಂಬುದು ಕತೆಗಾರರ ಧೋರಣೆಯಾಗಿದೆ. "ನರ್ತನ ಗೋಷ್ಠಿಯ ನಂತರ" ಕತೆಯು ಮನುಷ್ಯ ಹಾಗೂ ಪರಿಸರದ ಸಂಬಂಧದ ಹಿನ್ನಲೆಯಲ್ಲಿ ಮೂಡುತ್ತದೆ. ಕ್ರೌರ್ಯದ ತಿಳುವಳಿಕೆ ಬಂದಾಗ ಒಬ್ಬ ವ್ಯಕ್ತಿಯ ಪ್ರೇಮದ ಭಾವನೆಯೂ ಮುದುಡಿ ಹೋಗುವ ಅಪಾಯದ ಸೂಚನೆ ಈ ಕತೆಯಲ್ಲಿದೆ.

ಮನುಷ್ಯನ ನೈಜಸ್ಥಿತಿಯ ಅರಿವು, ನೈತಿಕ ಅನುಮಾನಗಳಿಗೆ ಉತ್ತರ ಕಂಡುಕೊಳ್ಳುವುದು, ಸತ್ಯದರ್ಶನ—ಇವುಗಳನ್ನು (ಉನ್ನತ ಕಲಾಕಾರರಾಗಿ) ಅಸಾಧಾರಣ ಧೈರ್ಯದಿಂದ ತೊಲ್‌ಸ್ತೋಯ್‌ರವರು ಈ ಕತೆಗಳಲ್ಲಿ ಚಿತ್ರಿಸಿದ್ದಾರೆ. ಈ ಘನೋದ್ದಿಶ್ಯಗಳನ್ನು ಕಲಾತ್ಮಕವಾಗಿ ಸೆರೆಹಿಡಿದಿರುವುದೇ ತೊಲ್‌ಸ್ತೋಯ್‌ರವರ ಯಶಸ್ಸಾಗಿದೆ. ಅವರ ಈ ಎಲ್ಲ ಆಶಯಗಳನ್ನು ಸಮಗ್ರವಾಗಿ ಹಿಡಿದುಕೊಡುವ ನಾಲ್ಕು ನೀಳ್ಗತೆಗಳನ್ನು ಸಮರ್ಥವಾಗಿ ಅನುವಾದಿಸಿರುವ ಶ್ರೀ ಗೋಪಾಲಕೃಷ್ಣರಾವ್ ಅವರೂ ಪ್ರಕಟಿಸಿರುವ ಮಾಸ್ಕೋದ ಪ್ರಗತಿ ಪ್ರಕಾಶನದವರೂ ಅಭಿನಂದನಾರ್ಹರು.

ಎ. ಆರ್. ನಾಗಭೂಷಣ.

* * *

**ನಿನ್ನ ಹೆಜ್ಜೆ ಗುರುತಿನ ಬಳಿ**—ಲೇ: ಸಿ. ವಿ. ಮುರುಳಿಧರ, ಪ್ರ: ಲೇಖಾ ಪ್ರಕಾಶನ, ರಾಜಾಜಿನಗರ, ಬೆಂಗಳೂರು, ಬೆಲೆ ರೂ. 3.

**ಕುದಿ**—ಲೇ: ರವೀಂದ್ರ ವಿ. ಪಾಟೀಲ, ವೀರಸಂಗ ಪ್ರಕಾಶನ, ಸಲಗರ (ಪ್ಪಿ.ಕೆ) ಗುಲಬರ್ಗಾ 585374 ಬೆಲೆ ರೂ. 5.

ಪ್ರೇಮ, ಪ್ರೀತಿ ಇವುಗಳು ಸಾಹಿತ್ಯಕ್ಕೆ ವಸ್ತುವಾಗಿರುವಷ್ಟು ಬೇರಾವುದೂ ಆಗಿಲ್ಲ. ಅದರಲ್ಲೂ ಯುವ ಕವಿಗಳಿಗಂತೂ ಇದು ತುಂಬಾ ಪ್ರಿಯವಾದ ವಸ್ತು. ಇದು ಅವರ ಸಾಮಾನ್ಯ ಅನುಭವವಾಗಿರುವುದು ಬಹುಶಃ ಇದಕ್ಕೆ ಒಂದು ಕಾರಣ ವಾದರೆ ಬರುವಷ್ಟೂ ಇನ್ನೂ ಕವನವಾಗಿಸಿಕೊಳ್ಳುವ ಸಾಧ್ಯತೆ ಇದಕ್ಕಿರುವ ಇನ್ನೊಂದು ಕಾರಣ.

**ನಿನ್ನ ಹೆಜ್ಜೆ ಗುರುತಿನ ಬಳಿ** ಶೀರ್ಷಿಕೆಯೇ ಸೂಚಿಸುವಂತೆ ಪ್ರೇಯಸಿಯ ನೆನಪು. ಅದರ ಸುತ್ತ ಹೆಣೆಯಲಾಗಿರುವ, ಆಸೆ, ನಿರಾಸೆ, ನಿರೀಕ್ಷೆ, ಭ್ರಮ ನಿರಸನ, ಇತ್ಯಾದಿಗಳ ಚಿತ್ರಣ.

ಬೋಳಾಗಿ, ಒಣಗಿ, ಚಿಗುರಲಾರದ ಮರಗಳು, ಒಣ ಮೋಡಗಳು **ನಿರೀಕ್ಷೆ** ಕವನದಲ್ಲಿ ಪ್ರೇಯಸಿಯ ಕಾಠಿಣ್ಯ ಪೂರ್ಣ ಹೃದಯದ ಪ್ರತೀಕವಾಗಿ, ಬೋಳುಮರವನ್ನು ಚಿಗುರಿಸುವ ಮಳೆಯ ಮುನ್ಸೂಚನೆಯಾದ ಮಿಂಚು ಅವಳ ಮನವನ್ನು ಕರಗಿಸಬಹುದೇ ಎಂಬ ನಿರೀಕ್ಷೆಯಿದೆ. ಇದೇ ಧಾಟಿಯಲ್ಲಿ ಸಾಗುವ ಕವನಗಳಲ್ಲಿ ಮುಖ್ಯವಾದದ್ದು **ಸಮಾಧಾನ** ಮತ್ತು **ಏಕಾಂಗಿ**, ಗದ್ದಲ ತುಂಬಿದ ಗಿಜಿಗಿಜಿಗುಟ್ಟುವ ಬಸ್ಸಿನೊಳಗಿರುವ ಅವಳನ್ನು ಕರೆದು ಆಕೆ ಪ್ರತಿ ಕ್ರಿಯಿಸದಿದ್ದಾಗ ಅದರ ಕಾರಣ ತಿಳಿಯಲಾರದೆ ಚಡಪಡಿಸಿ, ಬಹುಶಃ ಗಲಾಟೆ ಯಲ್ಲಿ ಆಕೆಗೆ ತನ್ನ ಕೂಗು ಕೇಳಿರಲಾರದೆಂದು ತನ್ನನ್ನು ತಾನೇ ಸಂತೈಸಿ ಕೊಳ್ಳುವುದು **ಸಮಾಧಾನ** ಕವನದಲ್ಲಿ ಕಾಣುತ್ತೇವೆ. **ಏಕಾಂಗಿ** ಕಿರುಗವನ ವಾದಾಗ್ಯೂ ತೀರಾ ಸರಳವಾಗಿ "ಯುಗಳ ಗೀತೆಗಳನ್ನು ಒಬ್ಬನೇ ಹಾಡುತ್ತಿ ರುವೆ" ಎಂದು ಏಕಾಂಗಿತನವನ್ನು ವ್ಯಕ್ತಪಡಿಸುತ್ತದೆ. ಮುರಳೀಧರ ಅವರ ಕವನಗಳಲ್ಲಿ ಗಮನಿಸಬಹುದಾದ ಅಂಶವೆಂದರೆ ಎಲ್ಲೂ, ಆತನಿಗೆ ಪ್ರೇಯಸಿಯ ಮಿಲನದ ಅನುಭವ ಉಂಟಾಗುವುದಿಲ್ಲ, ಎಲ್ಲ ಕಡೆ ಏಕಪಕ್ಷೀಯ ಪ್ರೇಮ, ಅದರಿಂದುಂಟಾಗುವ ಹಂಬಲಿಕೆ, ಮೂಡಿಬರುವ ನಿರರ್ಥಕತೆ ಹಾಗೂ ವ್ಯರ್ಥತೆ.

ಇವರ ವಾಚಾಳಿತನ ಉತ್ತಮ ಕವನ ರಚನೆಗೆ ಅಡ್ಡಿಯಾಗಿದೆ. ಎಲ್ಲ

ಭಾವನೆಗಳೆನ್ನೂ ಕವನವಾಗಿಸುವ ಆತುರತೆಯನ್ನು ಕಡಿಮೆ ಮಾಡಿಕೊಂಡು, ಆಳವಾದ ಅನುಭವವನ್ನು ಪಡೆಯುವ ಪ್ರಯತ್ನ ಇವರ ಕವನದ ಮಟ್ಟವನ್ನು ಏರಿಸಬಲ್ಲದು ಎಂಬ ಮಾತು, ಅವರ ಪ್ರಾಮಾಣಿಕ ಭಾವನೆಗಳನ್ನು ಕವನ ವಾಗಿಸುವ ಪ್ರಯತ್ನವನ್ನು ಕೊಲ್ಲದೆ ಉತ್ತಮ ಕವನಗಳ ರಚನೆಗೆ ಸಹಾಯಕ ವಾಗಬಲ್ಲದೆ ?

**ಕುದಿ** ಕವನ ಸಂಕಲನ, **ನಿನ್ನ ಹೆಜ್ಜೆಗುರುತಿನ ಬಳಿ** ಸಂಕಲನಕ್ಕಿಂತ ಹೆಚ್ಚು ಆಸೆ ಹುಟ್ಟಿಸುವ, ಹೆಚ್ಚು ಸಾಧ್ಯತೆಗಳನ್ನು ಹೊಂದಿರುವ ಸಂಕಲನ. **ಕುದಿ** ವಸ್ತು, ವ್ಯಾಪ್ತಿ ಮತ್ತು ನಿರೂಪಣೆಗಳ ದೃಷ್ಟಿಯಿಂದ ಹೆಚ್ಚು ವೈವಿಧ್ಯಪೂರ್ಣವಾಗಿ ಮೂಡಿಬಂದಿದೆ. ಸಾಮಾನ್ಯವಾಗಿ ಯುವ ಕವಿಗಳಲ್ಲಿ ಕಾಣುವ ಸಮಕಾಲೀನ ಸಮಾಜವನ್ನು ಕುರಿತಾದ ಕಾಳಜಿ ಪಾಟೀಲರಲ್ಲೂ ಕಂಡುಬರುತ್ತದೆ. ಈ ಸಮಾಜ ಅದರ ವಿವಿಧ ಮುಖಗಳೊಡನೆ ಅವರ ಕವನಗಳಲ್ಲಿ ಚಿತ್ರಿತವಾಗಿದೆ. ಈ ಹಿನ್ನೆಲೆಯಲ್ಲಿ "ಒಟ್ಟನಲ್ಲಿ ನಾವು ಸಾಯೋಕ್ಕೇ ಹುಟ್ಟಿದವರು" ಎಂದು ಭಾವಿಸುವ ಬಡವರ ಅಸಹಾಯಕತೆಯನ್ನು ದನಿಸುವ **ಬಡವ** ಮತ್ತು **ಶೋಷಣೆ** ಕವನಗಳನ್ನು ಕಾಣಬಹುದು. ಏನನ್ನೂ ಅರಿಯದ ಯಾರ ಶೀಟಿಗಾಗಿಯೋ ಬಂದ್ ಮತ್ತು ಚಳುವಳಿಗಳಲ್ಲಿ ತೊಡಗಿ, ನಿತ್ಯದ ಕೂಳಿಗೆ ಒದ್ದಾಡಿ ಹಸಿವೆ ಯಿಂದ ಪರಿತಪಿಸುವರ ಬಗ್ಗೆ **ರೈತರು** ಕವನ ಅಪಾರ ಅನುಕಂಪವನ್ನು ವ್ಯಕ್ತಪಡಿ ಸುತ್ತದೆ. ಜೊತೆಗೆ ಭಾರತ ಇಂದಿರುವ ಹೀನಸ್ಥಿತಿ, ಮದ್ಯಪಾನದ ಸಮಸ್ಯೆ (**ಕುಡಿತ-ಕುಡಿತ**) ಡಂಭಾಚಾರ ಮತ್ತು ಸಮಯ ಸಾಧಕತ್ವ (**ಇಲಿ**), ಸಮಾಜದ ಏಳಿಗೆಗಾಗಿ ನಿಷ್ಠಾವಂತ ನಾಯಕರು ನಿರೂಪಿಸಿದ ತತ್ವಗಳ ಮರೆಯಲ್ಲಿ ಅವರ ಅನುಯಾಯಿಗಳು ನಡೆಸುವ ಅನಾಚಾರಗಳು (**ಅನುನಾಯಿಗಳು**), ವ್ಯಕ್ತಿಯ ವೈಯಕ್ತಿಕ ಬದುಕಿನ ಏಳುಬೀಳುಗಳೊಡನೆ ಸ್ಪಂದಿಸದೆ ಅಧಿಕಾರದಲ್ಲಿರುವವರ, ಶ್ರೀಮಂತರ ಮರ್ಜಿಗೆ ಗೋಣು ಹಾಕುವವರು, ಅದೇ ವ್ಯಕ್ತಿ ಕೆಳಗೆ ಬಿದ್ದಾಗ ಅನುಕಂಪ ತೋರುವ ಬದಲು ಹೀನಾಯವಾಗಿ ಕಾಣುವ ಸಮಾಜದ ಪ್ರವೃತ್ತಿ (**ಆಗ-ಈಗ**) ಇವುಗಳನ್ನು ಪ್ರಾಮಾಣಿಕವಾಗಿ ಚಿತ್ರಿಸುವ ಯತ್ನ ಈ ಮೇಲಿನ ಕವನಗಳಲ್ಲಿ ಕಂಡುಬರುತ್ತದೆ.

**ಕುದಿ ಪ್ರತಿರೂಪ** ಮುಂತಾದ ಕವನಗಳಲ್ಲಿ ಭಾವನೆಗಳ ತೀವ್ರತೆಯನ್ನು ಮತ್ತು ವಸ್ತುವಿನ ಆಳಕ್ಕಿಳಿಯುವ ಪ್ರಯತ್ನ ಕಂಡುಬಂದಾಗ್ಯೂ, ಕೇವಲ ಉದ್ಗಾರ ಮತ್ತು ಆವೇಶದ ಮಾತುಗಳಾಗುವ ಅಪಾಯವನ್ನು ಸಂಪೂರ್ಣ ಮೀರಿಕೊಂಡಿಲ್ಲ. ಇದೇ ಮಾತನ್ನು ಅವರ ಬಹುತೇಕ ಕವನಗಳ ಬಗ್ಗೆಯೂ ಹೇಳಬಹುದು. ಈ ಮಿತಿಗಳ ನಡುವೆಯೂ ಪಾಟೀಲರು ಭರವಸೆ ಹುಟ್ಟಿಸುವ ಕವಿಯಾಗಿದ್ದಾರೆ.

ಟಿ. ಎಸ್. ವೇಣುಗೋಪಾಲ್, ಶೈಲಜ.

## ಸ್ವೀಕಾರ

**ಬಿಂಬ** (ಕವನ ಸಂಕಲನ), ವೇಣುಗೋಪಾಲಸೊರಬ, ಸವಿತಾ ಪ್ರಕಾಶನ, ಕನಕಪುರ; ರೂ. 7.

**ಗಣಪತಿ** (ವಿಚಾರ), ಮೂಲ : ಪುರಾಣಂ ಸುಬ್ರಮಣ್ಯ ಶರ್ಮ, ಅನು : ನಗರಗೆರೆ ರಮೇಶ್, ಶಂಬೂಕ ಪ್ರಕಾಶನ, ಗೌರಿಬಿದನೂರು; ರೂ. 4 ಮತ್ತು 2.

**ವಾಸ್ತವ** (ವಿಮರ್ಶಾಸಂಕಲನ), ಆರ್ಕೆ, ಪ್ರ : ಯುವಕರ ಸಂಘ, ರಾಮನಗರ, ಹಗರಿಬೊಮ್ಮನಹಳ್ಳಿ, ಬಳ್ಳಾರಿ (ಜಿ); ರೂ. 12.

**ಅನಾವರಣ** (ಕವನ ಸಂಕಲನ), ಬಾ.ಹ. ರಮಾಕುಮಾರಿ, ಕವಿತಾ ಪ್ರಕಾಶನ, ಕ್ಯಾತ್ಸಂದ್ರ; ರೂ. 5.

**ಸಾಪೇಕ್ಷಕ ಸಿದ್ಧಾಂತವು ಎಂತಹುದು ?** (ವಿಜ್ಞಾನ) ಅನು : ಡಾ. ವಿ. ಆರ್. ತಿರುವೆಂಕಟಾಚಾರ್, ಮಿರ್ ಪ್ರಕಾಶನ, ಮಾಸ್ಕೋ; ರೂ. 2–50.

**ಮಾರ್ಕ್ಸ್‌ವಾದಿ-ಲೆನಿನ್‌ವಾದಿ ಬೋಧೆಯ ಮೂಲಪಾಠಗಳು** (ಕೈಪಿಡಿ) ರೂ. 8.

**ವಿ. ಐ. ಲೆನಿನ್ : ಮಾಡಬೇಕಾದುದೇನು ?** (ಲೇಖನಗಳು) ರೂ. 3–25. ಈ ಎರಡು ಪುಸ್ತಕಗಳ ಅನುವಾದ : ಕೆ. ಎಲ್. ಗೋಪಾಲ ಕೃಷ್ಣರಾವ್, ಪ್ರಗತಿ ಪ್ರಕಾಶನ, ಮಾಸ್ಕೋ.

**ಗ್ರೀಷ್ಕ ಹಾಗೂ ಖಗೋಳಯಾತ್ರಿ** (ಮಕ್ಕಳ ಸಾಹಿತ್ಯ–ಸಚಿತ್ರ) ರೂ. 2–25.

**ಮೃಗಾಲಯದ ಮಕ್ಕಳು** (ಮಕ್ಕಳ ಸಾಹಿತ್ಯ–ಸಚಿತ್ರ) ರೂ. 2–50.

**ಯಾರ ಬದುಕು ಹೇಗೆ** (ಮಕ್ಕಳ ಸಾಹಿತ್ಯ–ಸಚಿತ್ರ) ರೂ. 2--50 ಈ ಮೂರು ಪುಸ್ತಕಗಳ ಅನುವಾದ : ಕೆ. ಎಲ್. ಗೋಪಾಲಕೃಷ್ಣರಾವ್, ರಾದುಗ ಪ್ರಕಾಶನ, ಮಾಸ್ಕೋ.

**ಮೂರು ಚಿತ್ರ–ಮೂರುದಾರಿ** (ಅನುಭವ), ಜಿ. ವಿ. ಅಯ್ಯರ್; ರೂ. 8.

**ಕಮ್ಯುನಿಸಂ** (ವಿಚಾರ), ಬಿ.ವಿ. ಕಕ್ಕಿಲಾಯ; ರೂ. 2.

**ಸಂಗ್ರಹ ಭಾರತಾಯಣ** (ವಿಡಂಬನೆ) ವ್ಯಾಸರಾಯ ಬಲ್ಲಾಳ; ರೂ. 7.

**ಮಾರ್ಕ್ಸ್‌ವಾದ ಮತ್ತು ಭಗವದ್ಗೀತೆ** (ವಿಚಾರ) ಮೂಲ : ಎಸ್. ಜಿ. ಸರ್ದೇಸಾಯಿ ಮತ್ತು ದಿಲೀಪ್ ಬೋಸ್, ಅನು : ಎಸ್. ಆರ್. ಭಟ್, ರೂ. 8. ಈ ನಾಲ್ಕು ಪುಸ್ತಕಗಳ ಪ್ರಕಾಶಕರು ಹಾಗೂ ಮಾಸ್ಕೋ ಅನುವಾದಿತ ಕೃತಿಗಳ ವಿತರಕರು : ನವಕರ್ನಾಟಕ ಪ್ರಕಾಶನ, ಬೆಂಗಳೂರು–9.